ಸೋದೆ ಮಠದ

ಶ್ರೀ ವಿಶ್ವೇಂದ್ರತೀರ್ಥರ

# ಕೀರ್ತನ ಮಂಜರಿ

ಪೂಜ್ಯ ಶ್ರೀ ವಿಶ್ವೋತ್ತಮತೀರ್ಥರ
ಆಶೀರ್ವಚನದೊಂದಿಗೆ

ಸಂಪಾದಕ
ಶ್ರೀನಿವಾಸ ಹಾವನೂರ

ಪ್ರಕಾಶನ
ಹಾವನೂರಿನ ಶ್ರೀ ವಾದಿರಾಜರ
ಮೃತ್ತಿಕಾ ವೃಂದಾವನ ಮಠ
೨೦೦೧

Sode Mathada Shri VISHVENDRATIRTHARA KEERTHANEGALU. Ed. by Shrinivas Havanur.
Published by :
Pp. 91 + Illus. - 2001. Rs. 30-00



೨೦೦೧ ರೂ. ೩೦.೦೦

ಪ್ರಕಾಶಕರು : ಹಾವನೂರಿನ ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ ಮಠ
ಅಂಚೆ ಹಾವನೂರ ೫೮೧೧೩೩ (ಜಿ. ಹಾವೇರಿ.)

ಪ್ರತಿಗಳಿಗಾಗಿ: ಡಾ. ಶ್ರೀನಿವಾಸ ಹಾವನೂರ
೩೬, ಆಶ್ರಯ, ವಿನಾಯಕ ಲೇಔಟ್
ವಿಜಯನಗರ III, ಬೆಂಗಳೂರು - ೫೬೦ ೦೪೦.
ಫೋನ್ : ೩೩೮೪೫೨೯

ಶ್ರೀ ಸೋದೆ ಮಠ, ರಥಬೀದಿ
ಉಡುಪಿ : ೫೭೬ ೧೦೧.

ಚಿತ್ರವಿನ್ಯಾಸ : ಶ್ರೀ ರವಿಶಂಕರ, ಡಿಸೈನ್ ಬೇಸ್, ಬೆಂಗಳೂರು.
ಅಕ್ಷರ ವಿನ್ಯಾಸ : ಪ್ರಸಾಧನ್ ಕಂಪ್ಯೂಟರ್ಸ್, ಬಿಜೈ, ಮಂಗಳೂರು.
ಮುದ್ರಣ : ವೈಭವಿ ಗ್ರಾಫಿಕ್ಸ್, ಬೆಂಗಳೂರು.

## ಪರಿವಿಡಿ



### ಚಿತ್ರಗಳು

## ಆಶೀರ್ವಚನ

ನಮ್ಮ ಪರಮ ಪೂಜ್ಯ ಗುರುಗಳೂ ಸ್ವರೂಪೋದ್ಧಾರಕರೂ ಆದ ಶ್ರೀ ಶ್ರೀ ವಿಶ್ವೇಂದ್ರತೀರ್ಥ ಶ್ರೀಪಾದಂಗಳವರು ರಚಿಸಿದ ಈ ಕೀರ್ತನೆಗಳು ಪ್ರಕಟವಾಗುತ್ತಿರುವುದು ನಮಗೆ ಪರಮ ಸಂತೋಷವನ್ನುಂಟುಮಾಡಿದೆ.

ಇವುಗಳನ್ನು 'ಕೀರ್ತನಮಂಜರಿ' ಎಂಬ ಹೆಸರಿನಲ್ಲಿ ಸುಮಾರು ಐವತ್ತು ವರ್ಷಗಳ ಹಿಂದೆ ನಮ್ಮ ಶ್ರೀಮಠದ ವತಿಯಿಂದ ಪ್ರಕಟಿಸಿದ್ದೆವು. ಅದೊಂದು ಕಿರಿಯಾಕಾರದ ಪುಸ್ತಕವಾಗಿದ್ದಿತು. ಪ್ರತಿಗಳು ಎಂದೋ ತೀರಿ ಹೋಗಿದ್ದುವು.

ಅದರ ಒಂದು ಪ್ರತಿಯನ್ನು ಹೇಗೋ ದೊರಕಿಸಿ ಶ್ರೀಮಾನ್ ಶ್ರೀನಿವಾಸ ಹಾವನೂರರು ಈಗ ವ್ಯವಸ್ಥಿತವಾಗಿ ಸಂಪಾದಿಸಿ ಶ್ರೀಗಳವರ ಪರಿಚಯ, ಕೃತಿ-ಸಮೀಕ್ಷೆ - ಇವನ್ನು ಸೇರಿಸಿ ಹೊರತರುತ್ತಿದ್ದಾರೆ. ಅವರು ಈ ಕೀರ್ತನಗಳ ಬಗ್ಗೆ ಕಳೆದ ನವಂಬರಿನಲ್ಲಿ ಬೆಂಗಳೂರಲ್ಲಿ ಉಪನ್ಯಾಸ ಮಾಡಿದ್ದರು. ಅದನ್ನು ಕೇಳಿ ಸಂತೋಷ ಪಟ್ಟೆವು. ಅವೇ ಅಂಶಗಳು ಈ ಸಮೀಕ್ಷೆ ಮುಂತಾದ್ದರಲ್ಲಿ ಬಂದಿರುವುದು ಯಥೋಚಿತವಾಗಿದೆ.

ನಮ್ಮ ಗುರುಗಳು ವೃಂದಾವನಸ್ಥರಾದಾಗ, ಉಡುಪಿಯ ಮಠಗಳ ಪರಂಪರೆಯಂತೆ ನಾವು ಬಾಲ ಸನ್ಯಾಸಿ ಆಗಿದ್ದು ನಮಗೆ ಅವರ ಸಂಪರ್ಕ ಕೇವಲ ಒಂದೆರಡು ತಿಂಗಳದ್ದು ಮಾತ್ರವೆ ಆಗಿದ್ದಿತು. ಆದಾಗ್ಯೂ ಅವರ ಸನ್ನಿಧಿಯು ಅಚ್ಚೊತ್ತಿದಂತೆ ನಮ್ಮ ಮನದಲ್ಲಿ ಉಳಿದಿದೆ.

ಈ ಕೀರ್ತನೆಗಳ ಮೊದಲ ಮುದ್ರಣದ ಕಾಲಕ್ಕೆ ನಮ್ಮ ಸೂಚನೆಯ ಮೇರೆಗೆ ವಿದ್ವಾಂಸರಾದ ಶ್ರೀ ಅಲೆವೂರು ಸೀತಾರಾಮಾಚಾರ್ಯರು ಮತ್ತು ಶ್ರೀ ಎಂ. ರಾಜಗೋಪಾಲಾಚಾರ್ಯರು ಹಾಡುಗಳ ಪಾಠವನ್ನು ಪರಿಷ್ಕರಿಸಿದ್ದರು. ಈಗ ಸುಪ್ರಸಿದ್ಧ ಸಂಶೋಧಕರಾದ ಶ್ರೀನಿವಾಸ ಹಾವನೂರರು ಸಮೀಕ್ಷೆ ಮುಂತಾದ ವಿವರಗಳನ್ನು ಕೊಟ್ಟು ಕೀರ್ತನೆಗಳ ರಸಗ್ರಹಣಕ್ಕೆ ಹೆಚ್ಚಿನ ಅವಕಾಶ ಒದಗಿಸಿದ್ದಾರೆ.

ಶ್ರೀ ಹಾವನೂರ ಅವರಿಗೆ ಇಂಥ ಕೈಂಕರ್ಯದಲ್ಲಿ ಸಾಕಷ್ಟು ಅನುಭವವಿದೆ. ಮೂರು ವರ್ಷಗಳ ಹಿಂದೆ ಅವರು 'ಹರಿದಾಸರು ಹಾಡಿ ಹೊಗಳಿದ ಶ್ರೀ ವಾದಿರಾಜರು' ಎಂಬ ಸಂಕಲನವನ್ನು ಸಿದ್ಧಗೊಳಿಸಿದ್ದರು. ಅದರಲ್ಲಿ ಶ್ರೀ ವಾದಿರಾಜ ಶ್ರೀಮಚ್ಚರಣರನ್ನು ಕುರಿತು ಹರಿದಾಸರುಗಳು ಭಕ್ತಿಪೂರ್ವಕವಾಗಿ ರಚಿಸಿದ, ನೂರರಷ್ಟು ಹಾಡುಗಳನ್ನು ನಾನಾ ಕಡೆಗಳಿಂದ ದೊರಕಿಸಿ ಅಚ್ಚುಕಟ್ಟಾಗಿ ಸಂಪಾದಿಸಿದ್ದಾರೆ. ಅವರು ಹಾಗೂ ಅವರ ಬಂಧುವರ್ಗದ ಗಲಗಲಿ ಮನೆತನದವರು ವಾದಿರಾಜ ಗುರುಗಳ ಆತ್ಯಂತಿಕ ಭಕ್ತರು. ಅವರ ಹಾವನೂರ ಗ್ರಾಮದಲ್ಲಿ ಯತಿವರೇಣ್ಯರ ಮೃತ್ತಿಕಾ ವೃಂದಾವನವಿದ್ದು ವ್ಯವಸ್ಥಿತವಾಗಿ ಪೂಜಾದಿ ಕಾರ್ಯಗಳನ್ನು ನಡೆಸಿಕೊಂಡು ಬಂದಿರುತ್ತಾರೆ.

ಪ್ರಕೃತ ಮೇಲ್ಕಾಣಿಸಿದ ಶ್ರೀ ವಾದಿರಾಜೀಯ ಕೀರ್ತನ ಸಂಕಲನಕ್ಕೆ ಪೂರಕವಾಗಿ, ನಮ್ಮ ಸೋದೆಮಠಕ್ಕೆ ಸಂಬಂಧಪಟ್ಟ ಹಾಗೂ ನಮ್ಮ ಗುರುಗಳೇ ರಚಿಸಿದ ಕೃತಿಗಳನ್ನು ಪ್ರಕಟಿಸುತ್ತಿದ್ದಾರೆ. ಅವರುಗಳಿಗೆ ಶ್ರೀ ವಾದಿರಾಜ ಕರಾರ್ಚಿತ ಶ್ರೀ ಹಯಗ್ರೀವದೇವರು ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆವು.

ಇತಿ, ಶ್ರೀ ಮನ್ನಾರಾಯಣ ಸ್ಮರಣೆಗಳು

ಶ್ರೀ ವಿಶ್ವೋತ್ತಮತೀರ್ಥರು

# ಪ್ರಸ್ತಾವನೆ

'ಹರಿದಾಸರು ಹಾಡಿ ಹೊಗಳಿದ ಶ್ರೀ ವಾದಿರಾಜರು' ಎಂಬ ಕೀರ್ತನ ಸಂಕಲನವನ್ನು ಸಂಪಾದಿಸುವಾಗ (೧೯೯೮) 'ರಾಜೇಶ ಹಯಾಸ್ಯ' ಮುದ್ರಿಕೆಯ ಕೆಲವು ಹಾಡುಗಳು ದೊರೆತವು. ಶ್ರೀ ವಾದಿರಾಜ ಸ್ತುತಿಪರವಾದ, ಅವನ್ನು ಮೇಲಿನ ಸಂಕಲನದಲ್ಲಿ ಸೇರಿಸಲಾಗಿದ್ದಿತು. ಆದರೆ ಅವರಾರು ಎಂಬುದು ತಿಳಿದಿರಲಿಲ್ಲ. ಈಗ ಸು. ೫೦ ವರ್ಷಗಳ ಹಿಂದೆ, ಸೋದೆ ಮಠದ ವತಿಯಿಂದ ಪ್ರಕಟವಾದ 'ಕೀರ್ತನ ಮಂಜರಿ' ಎಂಬ ಕಿರು ಹೊತ್ತಗೆ ಕಣ್ಣಿಗೆ ಬಿದ್ದಿತು. ಅದರಲ್ಲಿಯ ಕೀರ್ತನೆಗಳು ರಾಜೇಶ ಹಯಾಸ್ಯರವೇ. ಮತ್ತು ಅವರು ಈಗಿನ ಶ್ರೀಗಳವರ ಗುರುಗಳೆಂಬುದು ತಿಳಿದು ಸಂತೋಷವಾಯಿತು.

ಪ್ರಕೃತ ಅದರಲ್ಲಿಯ ಸೊಗಸಾದ, ಭಕ್ತಿ ಪುರಸ್ಸರವಾದ ಹಾಡುಗಳನ್ನು ವ್ಯವಸ್ಥಿತವಾಗಿ, ಟಿಪ್ಪಣಿಗಳೊಡನೆ ಪ್ರಕಟಿಸಬೇಕೆಂದು ಕಂಡಿತು. ಈಚೆಗೆ (ನವೆಂಬರ್ ೨೦೦೦) ಬೆಂಗಳೂರಲ್ಲಿ ಈ ಹಾಡುಗಳನ್ನು ಕುರಿತು ಶ್ರೀಗಳವರ ಸಮ್ಮುಖದಲ್ಲಿ ಉಪನ್ಯಾಸ ಮಾಡಿದೆ. ಇದೆಲ್ಲದರ ಫಲವೇ ಪ್ರಕೃತದ ಪುಸ್ತಕ.

ನಮ್ಮ ಹಾವನೂರ ಗ್ರಾಮದಲ್ಲಿ, ನೂರಿಪ್ಪತ್ತು ವರ್ಷಗಳ ಹಿಂದೆ ಸ್ಥಾಪಿತವಾದ ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನವಿದ್ದು ಅದರ ಪೂಜೆಯನ್ನು ಮಾಡುವ ಭಾಗ್ಯ ನಮ್ಮ, ಎಂದರೆ ಗಲಗಲಿ ಮನೆತನದ್ದಾಗಿದೆ. ನಾವೆಲ್ಲ ಬಂಧುಗಳು ಶ್ರೀ ವಾದಿರಾಜರ ಕೃಪೆಗೆ ಪಾತ್ರರಾದವರೆಂದು ನಂಬಿದ್ದೇವೆ. ಅವರ ಸ್ತುತಿಪರವಾದ ಹಾಡುಗಳ ಸಂಕಲನವನ್ನು ಹಾವನೂರಿನ ಶ್ರೀಮಠದ ವತಿಯಿಂದ ಪ್ರಕಟಿಸಿದ್ದಂತೆ ಇದನ್ನಾದರೂ ಶ್ರೀ ವಾದಿರಾಜರಿಗೆ ಅರ್ಪಿಸಿ ಹೊರತರುತ್ತಿದ್ದೇವೆ.

ಶ್ರೀ ವಿಶ್ವೇಂದ್ರತೀರ್ಥರ ಈ ಕೃತಿಯನ್ನು ಪ್ರಕಟಿಸುವಲ್ಲಿ ಮುಕ್ತಮನದಿಂದ ಸಹಾಯ ಮಾಡಿದ ಪೂಜ್ಯ ಶ್ರೀ ವಿಶ್ವೋತ್ತಮ ತೀರ್ಥರನ್ನು ಮೊದಲಿಗೆ ಅಭಿವಂದಿಸುವೆ. ನನಗೆ ಬೇಕಾದ ಎಲ್ಲ ಮಾಹಿತಿ, ಚಿತ್ರಗಳನ್ನು ಒದಗಿಸಿ ಮಹೋಪಕಾರ ಮಾಡಿದ್ದಾರೆ. ಅದರಂತೆ ಸೋದೆ ಮಠದ ಕಛೇರಿಯ ಶ್ರೀ ಜನಾರ್ದನ ಉಪಾಧ್ಯಾಯರು, ಬೆಂಗಳೂರಿನ ಶ್ರೀ ಪ್ರಹ್ಲಾದಾಚಾರ್ಯರು. ಶ್ರೀ ವಿಶ್ವೇಂದ್ರತೀರ್ಥರ ಅಪೂರ್ವ ಚಿತ್ರವನ್ನು ಒದಗಿಸಿದ್ದಲ್ಲದೆ ತಾವು ರಚಿಸಿದ ಶ್ರೀಗಳ ಸ್ತುತಿಪರ ಹಾಡನ್ನು ಬಳಸಲು ಅನುಮತಿ ನೀಡಿದ್ದಾರೆ.

ಶ್ರೀ ಸೋದೆ ಮಠದ ಆತ್ಯಂತಿಕ ಭಕ್ತರಾದ ಡಾ. ವ್ಯಾಸ ಉಚ್ಚಿಲ್, ಶ್ರೀ ರಾಮಚಂದ್ರ ಉಚ್ಚಿಲ್, ಶ್ರೀ ವಿ. ಎಸ್. ಯಲವಿಗಿ, ಶ್ರೀ ಮಹಾಬಲರಾವ್ ಮತ್ತು ಶ್ರೀ ಜನಾರ್ದನ ರಾವ್ ಉಪಾಧ್ಯಾಯ; ಅದರಂತೆ ಹತ್ವಾರ ಸಮುದಾಯದವರು ಮತ್ತು ಇನ್ನಂಜೆಯ ವಿಷ್ಣುಮೂರ್ತಿ - ಹಯಗ್ರೀವ ವಿದ್ಯಾಸಂಸ್ಥೆಯವರು, ಇವರೆಲ್ಲರ ಸಹಾಯವನ್ನು ಇಲ್ಲಿ ನೆನೆಯುತ್ತೇನೆ.

ಕವರ್ ಚಿತ್ರವನ್ನು ತಯಾರಿಸಿದವರು ಕಂಪ್ಯೂಟರ್ ಕಲಾವಿದ ಶ್ರೀ ರವಿಶಂಕರರು. ಡಿ.ಟಿ.ಪಿ. ಕೆಲಸ ಮಾಡಿಕೊಟ್ಟವರು ಮಂಗಳೂರಿನ ಪ್ರಸಾಧನ ಕಂಪ್ಯೂಟರ್ಸ್‌ದವರು. ಇವರೀರ್ವರದು ನನ್ನ ಪುಸ್ತಕೀಯ ಪ್ರಕಾಶನ ಕಾರ್ಯದಲ್ಲಿ ಎಂದಿನ ಆತ್ಮೀಯತೆಯ ನೆರವು.

ಶ್ರೀನಿವಾಸ ಹಾವನೂರ

(ಸಂಪಾದಕ)

# ಶ್ರೀ ವಿಶ್ವೇಂದ್ರತೀರ್ಥರು
## (ಒಂದು ಕಿರು ಪರಿಚಯ)

### ಪರಂಪರೆ

ಶ್ರೀಮನ್ಮಧ್ವಾಚಾರ್ಯರ ಸಹೋದರರೂ ನೆಚ್ಚಿನ ಶಿಷ್ಯರೂ ಆದ ಶ್ರೀ ವಿಷ್ಣುತೀರ್ಥರಿಂದ ಆರಂಭವಾದ ಮಠಕ್ಕೆ ಸುರುವಿಗೆ ಕುಂಭಾಸಿ ಮಠವೆಂಬ ಹೆಸರಿದ್ದಿತು. ಮಹಾಮಹಿಮರಾದ ಶ್ರೀ ವಾದಿರಾಜರು ಸೋದೆಯಲ್ಲಿ ನೆಲೆನಿಂತ ಕಾರಣದಿಂದ ಸೋದೆ ಮಠವೆಂಬ ಅಭಿಧಾನ ಮುಂದುವರಿಯಿತು. ಅವರ ವ್ಯಕ್ತಿತ್ವದ ಪ್ರಭೆಯಿಂದಲೇ ಮುಂದಣ ಯತಿಗಳು ಬೆಳಕಿಗೆ ಬಂದರು.

ಅವರುಗಳಲ್ಲಿ ಮೊದಲಿಗೆ ಎದ್ದು ಕಾಣುವ ಹೆಸರು ಶ್ರೀ ವೇದನಿಧಿ ತೀರ್ಥರದು. ಸುಪ್ರಸಿದ್ಧ ಸ್ವಪ್ನವೃಂದಾವನಾಖ್ಯಾನದ ಪ್ರತೋದಕರು ಮಾತ್ರವಲ್ಲ; ಅದರಲ್ಲಿಯ ಸಾರಭೂತ ಶ್ಲೋಕಗಳನ್ನು ಶಿಲಾಲೇಖಗೊಳಿಸಿ ನಿಲಿಸಿದರು (೧೬೪೨). ಸೋದೆಯ ತ್ರಿವಿಕ್ರಮದೇವರ ಮುಂಭಾಗದಲ್ಲಿ ಧ್ವಜಸ್ತಂಭವು ಎಷ್ಟು ಪ್ರಯತ್ನಪಟ್ಟರೂ ನಿಲ್ಲದಿದ್ದಾಗ ಅದರ ಮೇಲ್ಗಡೆ ಶ್ರೀ ಗುರುರಾಜರ ಹಂಸಾರೂಢ ಶಿಲ್ಪವನ್ನು ಕೆತ್ತಿಸಿ ಸ್ತಂಭವನ್ನು ಸ್ಥಿರಗೊಳಿಸಿದರು.

ಅನಂತರ ಹೇಳಬೇಕಾದ ಹೆಸರು ಶ್ರೀ ವಾದಿವಂದ್ಯತೀರ್ಥರದು. ಗ್ರಂಥಕರ್ತರಾಗಿದ್ದ ಅವರು ರಚಿಸಿದ್ದು ಶ್ರೀ ವಾದಿರಾಜರ ಕೃತಿಗಳನ್ನು ಕುರಿತು. ಶ್ರೀ ವಿಬುಧವರ್ಯತೀರ್ಥರೂ (೨೮ನೆಯವರು) ಗ್ರಂಥಕರ್ತರೇ. ವಿಷ್ಣುಸಹಸ್ರನಾಮ ಸ್ತೋತ್ರಕ್ಕೆ ವ್ಯಾಖ್ಯಾನವನ್ನೂ, ಅದರಂತೆ 'ಸುಭದ್ರಾಹರಣ' ಎಂಬ ಕಾವ್ಯವನ್ನೂ ರಚಿಸಿದ್ದಾರೆ.

ಮುಂದೆ ೧೯ನೆಯ ಶತಮಾನದಲ್ಲಿ ಆಗಿಹೋದ ಶ್ರೀ ವಿಶ್ವಪ್ರಿಯತೀರ್ಥರ ಪಾಂಡಿತ್ಯ ಸಾಧನೆ ಅನನ್ಯವಾದದ್ದು. ಸೋದೆಯ ಜಾಗೃತ ವೃಂದಾವನದ ಮುಂದೆ ಕುಳಿತೇ ವ್ಯಾಸಂಗ ಮಾಡಿದುದಲ್ಲದೆ ಅನೇಕ ಪ್ರಮೇಯಗಳಿಗೆ ಆ ಸನ್ನಿಧಿಯಿಂದಲೇ ಉತ್ತರ ದೊರಕಿಸಿಕೊಂಡರಂತೆ. ಅದರಿಂದಾಗಿ ಅವರಿಗೆ 'ವೃಂದಾವನಾಚಾರ್ಯ' ಎಂಬ ಯಥಾರ್ಥವಾದ ಅಭಿಧಾನ ಸಂದಿದೆ. ಸಮಕಾಲೀನ ಪಂಡಿತರಲ್ಲಿ ಹಾಗೂ ಮಠಾಧೀಶರಲ್ಲಿ ಇವರಿಗೆ ಅಪೂರ್ವವಾದ ಮನ್ನಣೆ ಇದ್ದಿತು. ಕೊಚ್ಚಿ ದೇಶದ, ಅದರಂತೆ ಮೈಸೂರಿನ ಮಹಾರಾಜರುಗಳು ಇವರನ್ನು ವಿಶೇಷವಾಗಿ ಸನ್ಮಾನಿಸಿದರು.

ಶ್ರೀ ವಿಶ್ವಪ್ರಿಯರು ಪರಮ ವೈರಾಗ್ಯಶಾಲಿಗಳು. ಉತ್ಸವಾದಿ ಕಾಲದಲ್ಲಿಯೂ ಉರುಟು ಕೌಪೀನಧಾರಿಗಳಾಗಿ ಇರುತ್ತಿದ್ದರು. ಹನ್ನೆರಡು ವರ್ಷಗಳ ಕಾಲ ನಿರನ್ನತ್ವರಾಗಿ, ಬರಿಯೆ ಭತ್ತರಳನ್ನು ಸೇವಿಸಿ ದಿನಗಳೆದರು. ಉದ್ದೇಶ, ಮಧ್ಯತಾಲದ ಮಠದಿಂದ ವ್ಯಾಸ ಮುಷ್ಟಿಯನ್ನು ತಂದು ಶ್ರೀಕೃಷ್ಣನ ಸನ್ನಿಧಿಯಲ್ಲಿಟ್ಟು ಪೂಜಿಸಬೇಕಿತ್ತು. ಈ ಶ್ರೀಗಳವರನ್ನು ಕುರಿತೇ ಹಲವಾರು ಸಂಸ್ಕೃತ ಗ್ರಂಥಗಳು ಪ್ರಕಟವಾಗಿವೆ.

ಅವರಿಂದ ಆಶ್ರಮವನ್ನು ಸ್ವೀಕರಿಸಿದ ಶ್ರೀ ವಿಶ್ವಾಧೀಶರೂ ಗುರುವಿಗೆ ಸಮಾನವಾದ ಪಾಂಡಿತ್ಯವನ್ನು ಪಡೆದು ಖ್ಯಾತನಾಮರಾಗಿದ್ದರು. ಅದರ ಪರಿಣಾಮವಾಗಿ ಇಂಗ್ಲಂಡಿನ ವಿಕ್ಟೋರಿಯಾ ರಾಣಿ ತನ್ನ ಪಟ್ಟಾಭಿಷೇಕದ ವಜ್ರಮಹೋತ್ಸವದ ಪ್ರಸಂಗದಲ್ಲಿ ಇವರಿಗೆ ಅಪ್ರಾರ್ಥಿತವಾಗಿ ಪ್ರಶಸ್ತಿ ಪತ್ರವನ್ನು ಕೊಟ್ಟಿದ್ದಾಳೆ. (ದಿ. ೮ ಸೆಪ್ಟೆಂಬರ್ ೧೮೯೭). ಆಗಿನ ಬೇರಾವ

ಮಠಾಧೀಶರಿಗೆ ಈ ರೀತಿಯ ಮುಕ್ತ ಪ್ರಶಂಸೆ ದೊರೆತದ್ದರ ಉಲ್ಲೇಖವಿದೆಯೆ? ತಿಳಿಯದು.

## ಶ್ರೀ ವಿಶ್ವೇಂದ್ರರು

ಇವರಿಂದ ಆಶ್ರಮ ದೀಕ್ಷೆಯನ್ನು ಪಡೆದವರೇ ಶ್ರೀ ವಿಶ್ವೇಂದ್ರ ತೀರ್ಥರು. ಜನನ ೧೯೪೯ರಲ್ಲಿ. (ವಿಷು ಸಂವತ್ಸರದ ಆಶ್ವೀನ ವದ್ಯ ೫). ದೀಕ್ಷೆಯ ಕಾಲಕ್ಕೆ ಅವರು ೧೬ ವರ್ಷದವರಿದ್ದರು. ಅನಿತರಲ್ಲಿಯೇ ಸೋದೆ ಮಠದ ಪರ್ಯಾಯದ ಪಾಳಿ ಬಂದಿತು. ಹಿರಿಯ ಶ್ರೀಗಳಿಗೆ ದೇಹಾಲಸ್ಯ. ಸರಿ, ಶ್ರೀಕೃಷ್ಣನ ಪೂಜಾಕೈಂಕರ್ಯ ಇವರ ಪಾಲಿಗೇ ಬಂದಿತು. ಪರ್ಯಾಯ ಮಧ್ಯದಲ್ಲಿಯೇ ಶ್ರೀ ವಿಶ್ವಾಧೀಶರು ಪರಂಧಾಮವನ್ನೈದ ಸ್ಥಿತಿ. ಆದರೂ ವಿಶ್ವೇಂದ್ರರು ವೈದಿಕ-ಲೌಕಿಕ ವ್ಯವಹಾರಗಳನ್ನು ವಿಚಕ್ಷಣೆಯಿಂದ ನಡೆಸಿಕೊಂಡು ಹೋದರು. ಇತ್ತ ತಮ್ಮ ಗುರುಬಂಧು ಶ್ರೀ ವಿಬುಧಪ್ರಿಯ ತೀರ್ಥರಲ್ಲಿ(ಅದಮಾರು ಮಠ) ಶಾಸ್ತ್ರಾಭ್ಯಾಸವನ್ನು ಮುಂದುವರಿಸಿದರು. ಕ್ರಮೇಣ ಇವರ ಖ್ಯಾತಿ ಪಸರಿಸತೊಡಗಿತು.

ಮುಂದೆ ಕೆಲವೇ ವರ್ಷಗಳಲ್ಲಿ 'ಶ್ರೀ ಮಧ್ವಸಿದ್ಧಾಂತ ಬೋಧಿನಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿ 'ಯುಕ್ತಿಮಲ್ಲಿಕಾ' ಹೆಸರಿನಲ್ಲಿ ಉಪನ್ಯಾಸ ಮಾಲಿಕೆಯನ್ನು ನಿಯಮಿತವಾಗಿ ನಡೆಸತೊಡಗಿದರು. ಅದಕ್ಕಾಗಿ ಹೊರಗಿನಿಂದ ವಿದ್ವಾಂಸರನ್ನು ಆಮಂತ್ರಿಸುವ ಪರಿಪಾಠವನ್ನು ರೂಢಿಸಿದರು. ಈ ಉಪನ್ಯಾಸಗಳಿಗೆ ಶ್ರೀ ಅನಂತೇಶ್ವರ ದೇವಾಲಯದ ಪ್ರಾಂಗಣವೇ ವೇದಿಕೆಯಾಗಿ ಮಾರ್ಪಟ್ಟಿತು.

ಶ್ರೀ ವಿಶ್ವೇಂದ್ರತೀರ್ಥರು ಹಲವು ಉಪಮಠಗಳ ಜೀರ್ಣೋದ್ಧಾರದತ್ತ ಗಮನವಿತ್ತರು. ಶಿರ್ವದ ಪಂಜುಮಾರು ಮಠ, ಶ್ರೀ ಮಧ್ವಾಚಾರ್ಯರು ನಡೆದಾಡಿದ ಇರ್ವತ್ತೂರು ನಡ್ಯಂತಾಯ

ಮಠ, ಶ್ರೀ ಭೂತರಾಜರ ನಾರಳಮಠ - ಇವುಗಳ ಕಟ್ಟಡಗಳು ನವೀಕರಣಗೊಂಡವು. ತದನಂತರ, ತಮ್ಮ ಜೀವಿತದ ಉತ್ತರಾರ್ಧದಲ್ಲಿ ಸೋದೆಯ ಕೆಲ ಉಪಮಂದಿರಗಳ ಶಿಲಾವಿನ್ಯಾಸಕ್ಕೆ ತೊಡಗಿದರು.

ಶ್ರೀಗಳವರು ತಮ್ಮ ಎರಡನೆಯ ಪರ್ಯಾಯ ಮುಗಿದ ಮೇಲೆ ಉತ್ತರ ಭಾರತ ಪ್ರವಾಸವನ್ನು ಕೈಕೊಂಡರು. ಅಲ್ಲಿಂದ ದಕ್ಷಿಣಯಾತ್ರೆ (೧೯೨೮). ಕೊಚ್ಚಿಯ ಶ್ರೀ ರಾಮವರ್ಮರ ಆಮಂತ್ರಣ ಅದಕ್ಕೆ ನಿಮಿತ್ತವಾಯಿತು. ಅಲ್ಲಿ ಅವರಿಗೆ ಸಂಭ್ರಮದ, ವೈಭವೋಪೇತವಾದ ಸನ್ಮಾನ. ಆ ಮಹಾರಾಜನ ಮೇಲೆ ಇವರು ಬೀರಿದ ಪ್ರಭಾವ ಎಷ್ಟೆಂದರೆ, ನಾಲ್ಕು ವರ್ಷಗಳ ಅನಂತರ ನಡೆದ ಮೂರನೆಯ ಪರ್ಯಾಯದ ಕಾಲಕ್ಕೆ ಬಹುವಿಧವಾದ ಅಲಂಕಾರಗಳನ್ನೂ ಮೂರು ಸಾವಿರ ರೂ.ಗಳ ನಗದು ಕಾಣಿಕೆಯನ್ನೂ ಕಳಿಸಿಕೊಟ್ಟಿದ್ದನು. ಕೊಚ್ಚಿಯವರ ಸನ್ಮಾನದ ವಿಚಾರವನ್ನು ತಿಳಿದ ಅನಂತಶಯನದ ಸಂಸ್ಥಾನಿಕನೂ ಇದೇ ರೀತಿ ಶ್ರೀ ವಿಶ್ವೇಂದ್ರರನ್ನು ಬರಮಾಡಿಕೊಂಡು ಸತ್ಕಾರ ಮಾಡಿದನು.

'ಭವ'ವೈದ್ಯಕೀಯದ ಜೊತೆಗೆ ಶ್ರೀಗಳವರು ದೈಹಿಕ ವೈದ್ಯಕೀಯವನ್ನೂ ಬಲ್ಲವರಾಗಿದ್ದರು. ಅರ್ಥಾತ್ ಆಯುರ್ವೇದ ರೀತ್ಯಾ ದಿನಾಲು ರೋಗಿಗಳಿಗೆ ಔಷಧ ನಿದಾನವನ್ನು ಸೂಚಿಸುತ್ತಿದ್ದರು. ಪುತ್ತಿಗೆ ಮಠದ ಆಗಿನ ಶ್ರೀ ಸುಧೀಂದ್ರತೀರ್ಥರು ವಿಶಿಷ್ಟ ವಾತರೋಗದಿಂದ ಬಳಲುತ್ತಿದ್ದರು. ಅದನ್ನು ಗುಣಪಡಿಸಿದ ಸಾರ್ಥಕ್ಯ ನಮ್ಮ ಶ್ರೀಗಳಿಗೆ ಸಲ್ಲಬೇಕು.

ಶ್ರೀ ವಿಶ್ವೇಂದ್ರರು ೧೯೩೮ರ ಸುಮಾರಿಗೆ ಉತ್ತರ ಕರ್ನಾಟಕದ ಸಂಚಾರ ಕೈಗೊಂಡರು. ಅದೇ ವರ್ಷವೆಂದು ಕಾಣುತ್ತದೆ - ಮೈಸೂರಿನ

ಕೃಷ್ಣರಾಜೇಂದ್ರ ಒಡೆಯರರ ಆಮಂತ್ರಣ. ಆ ಕಾಲಕ್ಕೆ ಉತ್ತರಾದಿ ಮಠದ ಶ್ರೀ ಸತ್ಯಧ್ಯಾನರು, ಕುಂದಾಪುರ - ವ್ಯಾಸರಾಯ ಮಠದ ಶ್ರೀ ವಿದ್ಯಾವಾರಿಧಿ ತೀರ್ಥರು ಮತ್ತು ಪುತ್ತಿಗೆ ಮಠದ ಶ್ರೀ ಸುಧೀಂದ್ರ ಪ್ರಭೃತಿಗಳೂ ಒಂದೆಡೆ ಸಮಾವೇಶಗೊಂಡಿದ್ದುದು ಅಪೂರ್ವ ಸನ್ನಿವೇಶವಾಗಿದ್ದಿತು.

ಶ್ರೀಗಳು ಅರಮನೆಯನ್ನು ಸಂದರ್ಶಿಸಿ ಮಹಾರಾಜರೊಡನೆ ಬಲು ಹೊತ್ತು ಧರ್ಮವಿಚಾರ ನಡೆಸಿದರಂತೆ. ಅರಮನೆಯಲ್ಲಿ ಬೃಹದಾಕಾರದ ರಾಜವಂಶೀಯ ತೈಲಚಿತ್ರಗಳಿವೆ. ಅವುಗಳ ವೀಕ್ಷಣೆಯಲ್ಲಿ ಶ್ರೀಗಳು ಆಸ್ಥೆ ತೋರಿದರೆಂದು ಕಾಣುತ್ತದೆ. ಮಹಾರಾಜರು ಕೆಲವನ್ನು ಮಠಕ್ಕೆ ದಾನವಾಗಿ ಇತ್ತರು. (ಅವೀಗ ಉಡುಪಿಯ ಕಛೇರಿಯಲ್ಲಿ ಇಡಲ್ಪಟ್ಟಿವೆ). ಅದೇನು ಅವರ ವ್ಯಕ್ತಿತ್ವ ಪ್ರಭಾವವೋ, ತಿಳಿಯದು. ಶ್ರೀಗಳು ಇನ್ನೂ ಕೆಲ ಕಾಲ ಮೈಸೂರಿನ ಪರಿಸರದಲ್ಲಿರಬೇಕೆಂದು ಮಹಾರಾಜರು ಅಪೇಕ್ಷಿಸಿದ್ದರೆಂದು ಕಾಣುತ್ತದೆ. ಅದರಿಂದಾಗಿ ಶ್ರೀಗಳವರು ಆ ವರ್ಷದ ತಮ್ಮ ಚಾತುರ್ಮಾಸವನ್ನು ಸಮೀಪದ ನಂಜನಗೂಡಿನಲ್ಲಿ ಕಳೆದರು.

ನಂಜನಗೂಡಿನಲ್ಲಿ ಅನೇಕ ಅದ್ವೈತ ಪಂಡಿತರಿದ್ದಾರೆ. ಆ ಮತವನ್ನು ನಿಂದಿಸ-ಖಂಡಿಸುವುದಕ್ಕಿಂತ, ದ್ವೈತ ಮತದ ವೈಶಿಷ್ಟ್ಯಗಳನ್ನೂ ಅದರ ಶ್ರೇಷ್ಠತ್ವವನ್ನೂ ವಿವರಿಸುವ ದೃಷ್ಟಿಯಿಂದ ಹಲವಾರು ಉಪನ್ಯಾಸಗಳನ್ನಿತ್ತರು. ಇಂದಿನ ದಿನಗಳಲ್ಲಿ ಈ ತರಹದ ಸಹಿಷ್ಣುತೆಯು ಅಗತ್ಯವಾದುದು. ಆ ಊರಲ್ಲಿರುವ 'ಶ್ರೀಕಂಠೇಶ್ವರ ಅದ್ವೈತ ಮಹಾಸಭೆ' ಎಂಬ ಸಂಸ್ಥೆಗೆ ಸಮನಾಗಿ 'ಶ್ರೀಕೃಷ್ಣ ಮಾಧ್ವಸಭೆ' ಎಂಬುದನ್ನು ಅದೇ ಊರಲ್ಲಿ ಸ್ಥಾಪಿಸಿ, ನಿಧಿಯನ್ನು ಸಂಗ್ರಹಿಸಿ ಕೊಟ್ಟರು.

ಕ್ರಿ.ಶ. ೧೯೪೧ರಲ್ಲಿ ಶ್ರೀ ವಿಶ್ವೇಂದ್ರತೀರ್ಥರು ತಮ್ಮ ಪೀಠಾರೋಹಣದ ಷಷ್ಟ್ಯಬ್ದವನ್ನು ವೈಭವದಿಂದ ಆಚರಿಸಿದರು. ಉಡುಪಿಯ ಸಹ-ಮಠಾಧೀಶರನ್ನು ಕರೆಯಿಸಿ ಸನ್ಮಾನ ಮಾಡಿದರು. ವಿದ್ವಜ್ಜನರಿಗೆ ದಾನದಕ್ಷಿಣಾದಿಗಳ ಧಾರೆಯೆರೆದರು. ಉಡುಪಿಯ ಕೆಲ ವಯೋವೃದ್ಧರು ಆ ಸಮಾರಂಭವನ್ನು ಈಗೂ ನೆನೆಯುವುದುಂಟು.

ಶ್ರೀ ವಿಶ್ವೇಂದ್ರರು ತಮ್ಮ ಜೀವಿತದ ಕೊನೆಯ ವರ್ಷ (೧೯೪೩) ಗ್ರಾಮಾಂತರ ಶಿಕ್ಷಣದತ್ತ ಗಮನ ಹರಿಸಿದುದೊಂದು ವಿಶೇಷ. ಹಳ್ಳಿಯ ಮಕ್ಕಳು ವಿದ್ಯಾವಂತರಾಗಬೇಕು; ನಗರದ ಹೈಸ್ಕೂಲಿಗೆ ಓಡಾಡುವುದು ತಪ್ಪಬೇಕು - ಎಂಬುದು ಅವರ ಮನೀಷೆಯಾಗಿದ್ದಿತು. ಇಂದು ಇಂಥ ಶಾಲಾರಂಭವು ಮಾಮೂಲಿಯ ಮಾತಾಗಿದೆ. ಆದರೆ ಸ್ವಾತಂತ್ರ್ಯ ಪೂರ್ವದಲ್ಲಿ, ಅದೂ ಗ್ರಾಮಾಂತರ ಪ್ರದೇಶದಲ್ಲಿ ಇಂಗ್ಲಿಶ್ ಶಾಲಾಸ್ಥಾಪನೆಯು ದುಸ್ಸಾಧ್ಯದ ಕೆಲಸವಾಗಿತ್ತು.

ಉಡುಪಿಯನ್ನು ದಾಟಿ ಮೂಲ್ಕಿ ಗಡಿಯ ವರೆಗಿನ ಪ್ರದೇಶದಲ್ಲಿ ಒಂದಾದರೂ ಹೈಸ್ಕೂಲ್ ಇರಲಿಲ್ಲ. ಗುರುಕುಲ ಮಾದರಿಯ ಆ ಶಾಲಾ ಸ್ಥಾಪನೆಗಾಗಿ ಶ್ರೀಗಳು ಇನ್ನಂಜೆಯನ್ನು ಆಯ್ದುಕೊಂಡರು. ಪಾಜಕ ಕ್ಷೇತ್ರಕ್ಕೆ, ಶ್ರೀ ವಾದಿರಾಜ ಮಠವಿರುವ ಉಂಡಾರುವಿಗೆ ನಡೆದಾಡುವಷ್ಟು ಸಮೀಪದ ಸ್ಥಳವದು. ಯಾವುದೇ ಪೂರ್ವಸಿದ್ಧತೆ ಇರಲಿಲ್ಲ. ಪ್ರತಿಯೊಂದೂ ಓನಾಮದಿಂದ ಸೃಷ್ಟಿಯಾಗಬೇಕು. ಶಾಲಾ ಕಟ್ಟಡ ಸಿದ್ಧವಾಯಿತು. ಹಾಸ್ಟೆಲ್, ಉಪಾಧ್ಯಾಯರ ವಸತಿಗೃಹಗಳಿಗೆ ಅಸ್ತಿವಾರ ಹಾಕಲಾಯಿತು. ಶಾಲೆಗೆ, ಗ್ರಾಮದೇವತೆಯ ಹಾಗೂ ತಮ್ಮ ಆರಾಧ್ಯಮೂರ್ತಿಯ - ಸ್ಮರಣಾರ್ಥ 'ಶ್ರೀ ವಿಷ್ಣುಮೂರ್ತಿ ಹಯವದನ ಸ್ವಾಮಿ

ಹೈಸ್ಕೂಲ್' - ಎಂದು ನಾಮಕರಣ ಮಾಡಲಾಯಿತು. ಶ್ರೀಗಳವರ ಕೃತಃಶಕ್ತಿ ಫಲಪ್ರದವಾಯಿತು. ಮುಂದೆ ಆ ಪರಿಸರಕ್ಕೆ ಶ್ರೀ ವಿಶ್ವೇಂದ್ರನಗರ ಎಂದೇ ನಾಮಕರಣವಾಗಿದೆ.

ಶಾಲೆ ೧೯೪೬ರ ಜೂನ್ ತಿಂಗಳಲ್ಲಿ ಆರಂಭವೇನೊ ಆಯಿತು. ಆದರೆ ಮುಂದೆ ಸೆಪ್ಟೆಂಬರದಲ್ಲಿ ದೃಢಕಾಯರಾಗಿಯೇ ಕಾಣುತ್ತಿದ್ದ (ಆಶ್ವೀನ ಶು. ೫) ಶ್ರೀಗಳವರು ಇಹಲೋಕವನ್ನು ತ್ಯಜಿಸಿದರು. ಕೇವಲ ೩೫ ದಿನಗಳ ಹಿಂದೆ ಈಗಿನ ಪೂಜ್ಯ ಶ್ರೀ ವಿಶ್ವೋತ್ತಮತೀರ್ಥರಿಗೆ ಆಶ್ರಮವಿತ್ತಿದ್ದರು.

ಹತ್ತಾರು ಧಾರ್ಮಿಕ - ಲೌಕಿಕ ಕೆಲಸಗಳಲ್ಲಿ ತೊಡಗಿದ್ದರೂ ಶ್ರೀ ವಿಶ್ವೇಂದ್ರತೀರ್ಥರು ಕೀರ್ತನ ರಚನೆಗೆ ಅದ್ಹೇಗೆ ವ್ಯವಧಾನವನ್ನು ಪಡೆದಿದ್ದರೊ! ಶ್ರೀ ವಾದಿರಾಜಾಂತರ್ಗತ ಶ್ರೀ ಹಯಾಸ್ಯನ ಕೃಪೆಯೇ ಎನ್ನಬೇಕು. ಆದ್ದರಿಂದ ಅವರು ಆಯ್ದುಕೊಂಡ ರಾಜೇಶ - ಹಯಾಸ್ಯ ಎಂಬ ಅಂಕಿತವು ಸಾರ್ಥಕವಾಯಿತು.

- ಶ್ರೀನಿವಾಸ ಹಾವನೂರ


ಆಧಾರ:

ಅ) ಶ್ರೀ ಬಿ. ರಾಮಕೃಷ್ಣಾಚಾರ್ಯರು ಶ್ರೀ ವಿಶ್ವೇಂದ್ರರ ಷಷ್ಟ್ಯಬ್ದ ಸಮಾರಂಭದ ನಿಮಿತ್ತ ೧೯೪೧ರಲ್ಲಿ ಪ್ರಕಟಿಸಿದ ಚರಿತ್ರ ಪುಸ್ತಕ.

ಆ) ಶ್ರೀ ಕುಂಭಾಸಿ ರಾಘವೇಂದ್ರ ಪುರಾಣಿಕರು ೨೦೦೧ರಲ್ಲಿ ಸಂಪಾದಿಸಿದ 'ಶ್ರೀ ಸೋದೆ ವಾದಿರಾಜ ಮಠದ ಕಿರುಪರಿಚಯ'

ಇ) ಶ್ರೀ ಬಿ. ಪಿ. ಜನಾರ್ದನ ಉಪಾಧ್ಯಾಯರು ಬರೆದ ಲೇಖ: 'ವಿಶ್ವೇಂದ್ರ ನಗರ - ಇನ್ನಂಜೆ.'

## ಕೃತಿ ಸಮೀಕ್ಷೆ

ದಕ್ಷಿಣ ಕನ್ನಡದ ಪರಿಸರದಲ್ಲಿ ಹರಿದಾಸ ಪರಂಪರೆ ಆರಂಭವಾದದ್ದು ಶ್ರೀ ವಾದಿರಾಜರಿಂದ. ಅದಕ್ಕೂ ಮುಂಚೆ ೧೬ನೆಯ ಶತಮಾನದ ಪೂರ್ವಾರ್ಧದಲ್ಲಿ ಶ್ರೀ ಶ್ರೀಪಾದರಾಜರು ಮತ್ತು ಶ್ರೀ ವ್ಯಾಸರಾಯರು ಕೀರ್ತನ ರಚನೆಯನ್ನು ಆರಂಭ ಮಾಡಿದ್ದಾದರೆ ಶ್ರೀ ವಾದಿರಾಜರು ಆ ಶತಮಾನ ಉತ್ತರಾರ್ಧದಲ್ಲಿ ಕೀರ್ತನ ನಿರ್ಮಿತಿಯಲ್ಲಿ ತೊಡಗಿದರು.

ಮುಂದಿನ ಶತಮಾನಗಳಲ್ಲಿ ದಾಸ ಸಾಹಿತ್ಯವು ಭರದಿಂದ ಬೆಳೆದರೂ ದಕ್ಷಿಣ ಕನ್ನಡದಲ್ಲಿ ಹಾಗಾಗಲಿಲ್ಲ. ಇದೊಂದು ಅಚ್ಚರಿಯ ಸಂಗತಿಯೇ ಸೈ. ಶ್ರೀ ವಾದಿರಾಜರ ಅನಂತರ 'ವರಾಹ ತಿಮ್ಮಪ್ಪ' ಮುದ್ರಿಕೆಯ ನೆಕ್ಕಾರು ಕೃಷ್ಣದಾಸರನ್ನು ಬಿಟ್ಟರೆ ೧೯ನೆಯ ಶತಮಾನದ ಉತ್ತರಾರ್ಧದ ವರೆಗೆ ಬೇರಾರೂ ಇಲ್ಲ. ಹಾಗಿರುತ್ತ ಶ್ರೀ ವಿಶ್ವೇಂದ್ರತೀರ್ಥರೊಬ್ಬರದೇ ಕೃತಿರಚನೆಯು ಎದ್ದು ಕಾಣುವಂತಾಗಿದೆ. ಅಲ್ಲದೆ, ಅವರಿಂದಾಗಿ ವಾದಿರಾಜೀಯ ಪರಂಪರೆಯಲ್ಲಿಯೆ ಕೀರ್ತನ ರಚನೆ ಮುಂದುವರಿವಂತಾದದ್ದು ವಿಶೇಷ ಸಂಗತಿಯಾಗಿದೆ.

ಇದರಲ್ಲಿ ೪೫ ಕೀರ್ತನೆಗಳಿವೆ. ಜೊತೆಗೆ ಒಂದು ತುಳು ಗೀತೆ ಮತ್ತು ಎರಡು ಸಂಸ್ಕೃತ ಸ್ತೋತ್ರಗಳಿದ್ದು ಅವುಗಳಲ್ಲಿ ಒಂದು ಶ್ರೀ ವಾದಿರಾಜ ಸ್ತುತಿಪರವಾಗಿದೆ. ಅವನ್ನು ಅನುಬಂಧವಾಗಿ ಕೊಟ್ಟಿದೆ. ಇತರ ಹರಿದಾಸರ ಕೃತಿಗಳಲ್ಲಿ ಕಂಡುಬರುವ ಉಗಾಭೋಗ, ಸುಳಾದಿಗಳನ್ನು ರಾಜೇಶ ಹಯಾಸ್ಯರು

ರಚಿಸಿದಂತಿಲ್ಲ. (ಮುದ್ರಿಕೆ ಒಮ್ಮೊಮ್ಮೆ ರಾಜೇಶ ಹಯಮುಖ, ಹಯಗ್ರೀವ ರೂಪವನ್ನೂ ತಾಳಿದ್ದಿದೆ.) ಹಾಡುಗಳೆಲ್ಲವೂ ಶುದ್ಧಾಂಗವಾಗಿ ದೇವ, ಗುರುಗಳ ಸ್ತುತಿಪರವಾದವುಗಳು. ನೀತಿಬೋಧೆಯಾಗಲೀ, ತತ್ವ ವಿವೇಚನೆಯಾಗಲೀ ಕಂಡು ಬರುವುದಿಲ್ಲ. ಒಟ್ಟಿನಲ್ಲಿ ಅವೆಲ್ಲ ಸುಲಭಗ್ರಾಹ್ಯ ಹಾಗೂ ಗೇಯಗುಣವುಳ್ಳವಾಗಿವೆ.

ತಾರತಮ್ಯತ್ವೇನ ಅವನ್ನು ತುಸು ವಿವರವಾಗಿ ಪರಿಶೀಲಿಸೋಣ.

ಶ್ರೀ ಹರಿಯ ಸ್ತುತಿ ಸುರುವಿನ 'ಉದಯರಾಗ'ವೇ ಖುಶಿ ಕೊಡುವಂತಹದು. ಭಗವಂತನನ್ನು ಏಳಿಸಲು ಮೊದಲಿಗೆ ಬಂದವರು ಸನಕಾದಿ ಮುನಿಗಳು. ಅಲ್ಲದೆ ನಾಗಭೂಷಣ, ವಿಭೀಷಣರೂ ಬಂದಿದ್ದಾರೆ. ಅರ್ಜುನ? ಶ್ರೀಕೃಷ್ಣನ ತಂಗಿಯನ್ನು ಬೇಡುವರೆ ಬಂದಿದ್ದಾನೆ! ಇದೇ ರೀತಿಯಾಗಿ, ಅಲ್ಲಿಗೆ ಆಗಮಿಸಿದ ಪ್ರತಿಯೊಬ್ಬರದೂ ವಿಶೇಷತೆ ಇದೆ. ದುರ್ವಾಸ ಮುನಿ 'ಕೋಪಿಗಳರಸ'ನಾಗಿದ್ದರೆ, ಭೃಗುಮುನಿ 'ಕೋಪ ದೊಳೊದೆದವ'. ಆದರೇನು, ಶ್ರೀಹರಿ ಎದ್ದೇಳುವ ಲಕ್ಷಣ ಕಾಣುತ್ತಿಲ್ಲ! ಕಾರಣ? "ಸಿರಿದೇವಿ ನಿನ್ನಂಘ್ರಿಗಳನೊತ್ತಿ ಬಿಡಳೇನೊ। ಮಾರುತಿಯ ಜಪವಿನ್ನು ಮುಗಿಯಲಿಲ್ಲೊ" ಎಂದು ಊಹಿಸುತ್ತಾರೆ ವಿಶ್ವೇಂದ್ರರು. ಆ ಸಮಯದಲ್ಲಿ ಶ್ರೀ ಹರಿಯ ವಿಶೇಷ ಪ್ರೀತಿಗೆ ಪಾತ್ರರಾದ ಸಿರಿದೇವಿ, ಮಾರುತಿ ಒಳಗೆ ಇದ್ದವರಾದರೆ ಉಳಿದವರು ಹೊರಗೆ ಬಾಗಿಲಲ್ಲಿ ನಿಂದವರೆಂಬುದನ್ನು ಗಮನಿಸಬೇಕು.

'ಶ್ರೀಹರಿಯ ದಾಸಗೆ ಭಯವಿಲ್ಲ' ಎಂಬುದನ್ನು ಆ ಮುಂದಿನ ಕೀರ್ತನೆಯಲ್ಲಿ ಚತುರೋಕ್ತಿಯ ಮೂಲಕ ವಿವರಿಸಿದ್ದಾರೆ. 'ತರಳ ಪ್ರಹ್ಲಾದಗೆ ಭಯವೆಂದಿಗೂ ಸೋಂಕಲಿಲ್ಲ. ತರಳನಪಿತಗೆ

ಭಯುವೆಂದಿಗೂ ತಪ್ಪಲಿಲ್ಲ. ಈ ಹೋಲಿಕೆಯನ್ನು ರಾವಣ-ವಿಭೀಷಣರಿಗೂ ಅನ್ವಯಿಸಿದ್ದಾರೆ.

'ನಾನೇನು ತಪ್ಪು ಮಾಡಿಲ್ಲ. ಆದ್ದರಿಂದ ನನ್ನನ್ನು ಪೊರೆಯು' ಎನ್ನುವುದನ್ನು ವಿವರಿಸುವಲ್ಲಿ (ಕೀ. ೩) ಒಂದು ಬಗೆಯ ವ್ಯಾಜೋಕ್ತಿ ಇದೆ. 'ವಸುದೇವ ದೇವಕಿಯರು ನಿನ್ನನ್ನೂ ಮನುಷ್ಯನಂತೆ ತಿಳಿಯುತ್ತಾರೆ. ನಾನೇನು ಹಾಗೆ ತಿಳಿದಿಲ್ಲ' ಎಂಬ ಮಾತಿದೆ. (ತಂದೆ-ತಾಯಿಗಳೇ ಆಗಿದ್ದ ಅವರು ಹಾಗೆ ತಿಳಿಯಬೇಕಾದದ್ದು ಸಹಜ). 'ನೀನು ವಂಚಿಸಿದಿ' ಎಂದು ನಿನ್ನಣ್ಣ ಬಲರಾಮ ತಿಳಿದು, ಅನ್ಯದೇಶಕ್ಕೆ ಹೊರಟುಹೋದ. ನಾನೇನೂ ಹಾಗೆ ಮಾಡಿಲ್ಲ' ಎಂಬ ಚತುರೋಕ್ತಿ ಇದೆ.

ಕೀರ್ತನೆ ೪ರಲ್ಲಿ ಭಗವಂತನ ವಿವಿಧ ಅವತಾರಗಳನ್ನು ಎತ್ತಿಕೊಂಡಿದ್ದಾರೆ. ಅವರಲ್ಲಿ 'ಮಹಿದಾಸ'ನ ಅವತಾರ ನಮಗೆ ಅಪರಿಚಿತವಾದದ್ದು. ಈತ ಬ್ರಹ್ಮದೇವರ ಮೊಮ್ಮಗ. ತಾಯಿ ಇತರಾ ಎಂಬವಳು. ಉಗ್ರ ತಪಸ್ಸು ಮಾಡಿದ. ಇವನ ಹೆಸರಿನ ಐತರೇಯ ಉಪನಿಷತ್ತು ಇದೆ. ಭಗವಂತನ ಅಂಶಾವತಾರ ಎಂದು ಭಾಗವತದಲ್ಲಿ ಹೇಳಿದೆ (ಸ್ಕಂದ ೧, ಅಧ್ಯಾಯ ೧).

ಮುಂದಿನ ಕೀರ್ತನೆಯಲ್ಲಿ ಅದೇ ರೀತಿಯ ಒಕ್ಕಣೆ, ವಿಶೇಷತ: ದಶಾವತಾರಗಳನ್ನು ಹೇಳುವಾಗ ಮುಂದುವರಿದಿದೆ. ವಿಶ್ವೇಂದ್ರತೀರ್ಥರು ಮತ್ತೆ ವ್ಯಾಜ ನಿಂದಾಸ್ತುತಿಯನ್ನು ಅನುಸರಿಸಿದ್ದಾರೆ. 'ನಾನಾ ವೇಷಗಳಿನ್ನು ನಿನಗ್ಯಾಕೊ ಹರಿಯೆ - ನಿನ್ನ ಭಕ್ತರು ನಿನ್ನ ತಿಳಿಯದೆ ಬಿಡರು' ಎಂದು ಹೇಳುತ್ತಾರೆ. ಮೀನಾಗಿ ಜಲದೊಳು ತಿರುಗುವುದು, ಕಂದನ ಪೊರೆಯಲು ಕಂಬದಿ ತೋರಿದುದು, ಮಲತಾಯ ನುಡಿಗಾಗಿ ವನವಾಸ ಅನುಭವಿಸಿದ್ದುದು

- ಮುಂತಾಗಿ ಭಗವಂತನ ವಿವಿಧ 'ವೇಷ'ಗಳನ್ನು ವರ್ಣಿಸಿದ್ದಾರೆ. ಭೂವರಾಹನು ಸೋದೆಮಠದ ಪೂಜಾದೈವತವೇನೊ ಸರಿಯೆ. ಶ್ರೀಮುಷ್ಣ ಎಂಬ ಕ್ಷೇತ್ರದಲ್ಲಿ ಅವನ ಮಂದಿರವೇ ಇದೆ. ಶ್ರೀ ವಿಶ್ವೇಂದ್ರರು ಅಲ್ಲಿಗೆ ಹೋದಾಗ, ಭೂವರಾಹ ಸ್ತುತಿಪರವಾದ ಕೀರ್ತನೆಯನ್ನು (ಕೀ. ೬) ರಚಿಸಿದಂತೆ ಕಾಣುತ್ತದೆ.

'ಕುದುರೆ ಕಂಡೀರ್ಯಾ....' ಎಂಬ ಹಯಗ್ರೀವ ಸ್ತುತಿಪರ ಹಾಡು (ಕೀ. ೫) ಶ್ರೀ ವಾದಿರಾಜರ 'ಕುದುರೆ ಬಂದಿದೆ ಚೆಲುವ ಕುದುರೆ ಬಂದಿದೆ' ಎಂಬ ಹಾಡಿಗೆ ಅನುವರ್ತಿಯಾಗಿದೆ. ಅದನ್ನು 'ಶ್ರೀ ವಾದಿರಾಜರ ಪೊರೆದ ಕುದುರೆ' ಎಂಬುದಾಗಿ ಕಾಣಿಸಿಯೇ ಇದ್ದಾರೆ. ಈ ಹಾಡಿನಲ್ಲಿ ಕೆಲವು ಕಲ್ಪನೆಗಳು ವಿನೂತನವಾಗಿವೆ. ಕುದುರೆಯನ್ನು ರಥಕ್ಕೆ ಹೂಡಬೇಕು; ಆದರೆ ಈ ಕುದುರೆ ಅರ್ಜುನನ ರಥವನ್ನೇ ಏರಿ ಕುಳಿತಿದೆ! 'ಇಂದಿರಾದೇವಿಯನ್ನು ಅಪ್ಪಿದ ಕುದುರೆ', 'ಮಂದರ ಗಿರಿಯನ್ನೆತ್ತಿದ ಕುದುರೆ' - ಇವೇ ಮೊದಲಾದ ಉಕ್ತಿಗಳಲ್ಲಿ ವಿರೋಧಾಭಾಸ ಚೆನ್ನಾಗಿ ವ್ಯಕ್ತವಾಗಿದೆ. ಈ ಹಾಡಿನಲ್ಲಿ ಹಯಗ್ರೀವ ದೇವರ ಸ್ತುತಿಯಿದ್ದಂತೆ; ಸೋದೆ ಮಠಕ್ಕೆ ಆತ್ಮೀಯವಾದ ತ್ರಿವಿಕ್ರಮ ದೇವರು. (ಕೀ. ೧೨) ಸಹ ವರ್ಣಿತನಾಗಿದ್ದಾನೆ.

ಉಡುಪಿ ಪರಿಸರದಲ್ಲಿ ಉಂಡಾರು ಎಂಬ ಗ್ರಾಮವಿದ್ದು ಅಲ್ಲಿ ಸುಂದರವಾದ ವಿಷ್ಣು(ಜನಾರ್ದನ) ಮೂರ್ತಿ ಇದೆ. (ಕೀ. ೧೩) ಈ ಭುಕ್ತಿಪುರೇಶ ಭಕ್ತರನ್ನು ಸದೈವ ಪಾಲಿಸುವ ದೈವತವೆಂದು ಜನ ನಂಬಿದ್ದಾರೆ. ಇದರ ೩ನೆಯ ನುಡಿಯಲ್ಲಿ ಬಾಲಕನೊಬ್ಬನ ಪ್ರಸ್ತಾಪವಿದ್ದು, ಆ ಕಥೆ ಹೀಗಿದೆ :

ಈ ಹಿಂದೆ ಅಲ್ಲಿಯ ಅರ್ಚಕನು ತನ್ನ ಮಗನಿಗೆ ನೈವೇದ್ಯ ತೋರಿಸಿ ಬಾರೆಂದು ಕಳುಹಿದ. ಆ ಚಿಕ್ಕ ಬಾಲಕನು ದೇವರು ನಿಜವಾಗಿ

ಊಟ ಮಾಡುವನೆಂದೇ ತಿಳಿದು ಆರ್ತನಾಗಿ ಬೇಡಿಕೊಂಡಾಗ ದೇವರು ಒಲಿದು ಅದನ್ನೆಲ್ಲ ಸ್ವೀಕರಿಸಿದ. ತಂದೆಯು ಮನೆಗೆ ಬಂದ ಮಗನನ್ನು ನೇವೇದ್ಯದ ಅನ್ನ, ಪಾತ್ರೆ ಎಲ್ಲಿದೆ ಎಂದು ಕೇಳಿದಾಗ "ದೇವರು ಊಟ ಮಾಡಿದ" ಎಂದು ಉತ್ತರ ಬಂತು. ಅದನ್ನು ಕೇಳಿ ಆತ ಮಗನನ್ನು ಥಳಿಸಿ ಬಿಟ್ಟ. ರಾತ್ರಿ ದೇವರು ಅರ್ಚಕನ ಕನಸಿನಲ್ಲಿ ಬಂದು "ಅದು ನಿಜ; ಆ ಪಾತ್ರೆ ನೀರಿನಲ್ಲಿದೆ" ಎಂದು ಹೇಳಿದನೆಂಬ ಕಥೆ ಈಗಲೂ ಆ ಊರಲ್ಲಿ ಪ್ರಚಲಿತವಿದೆ. ಕೋಳೂರ ಕೊಡಗೂಸಿನ ಕಥೆಯೂ ಇದೇ ರೀತಿ ಇದೆಯಲ್ಲವೆ?

ಹೀಗೆ ಬೇರೆ ಬೇರೆ ಊರುಗಳಲ್ಲಿರುವ ದೈವತಗಳ ಹೆಸರು ತೆಗೆದುಕೊಂಡು ಒಂದೊಂದು ಕೀರ್ತನೆ ರಚಿಸಿದ್ದಾರೆ. ತಿರುಪತಿಯ ವೆಂಕಟೇಶನಂತೂ ಸರಿಯೇ; ಆದರೆ ಅಲ್ಲಿ ಮಂಜುಗಣಿಯ ವೆಂಕಟೇಶನನ್ನೂ ತಂದಿದ್ದಾರೆ. (ಕೀ. ೧೦) ಇಲ್ಲಿಯ ವೆಂಕಟೇಶನ ಮೂರ್ತಿ ವಿಶಿಷ್ಟವಾದದ್ದು. ಆತನ ಕಾಲಲ್ಲಿ ಹಾವುಗೆಗಳಿವೆ. ಕೈಯಲ್ಲಿ ಬಿಲ್ಲು - ಬಾಣ! ಶ್ರೀ ವಾದಿರಾಜರು ಆ ಸ್ವರೂಪವನ್ನು ತೀರ್ಥ'ಪ್ರಬಂಧ'ದಲ್ಲಿ ಸೊಗಸಾಗಿ ವರ್ಣಿಸಿದ್ದಾರೆ : ಶ್ರೀ ವೆಂಕಟೇಶನು ದುಷ್ಟರೆಂಬ ಮೃಗಗಳನ್ನು ಬೆನ್ನಟ್ಟಿ ಸಕಲ ಭೂಮಿಯನ್ನೇ ಸುತ್ತಿ ಮಂಜುಗಣಿಗೆ ಬಂದ. ಅಲ್ಲಿಯ ಸುಂದರ ಪರಿಸರಕ್ಕೆ ಮನಸೋತು ಮುಂದೆ ಹೋಗದೆ ನಿಂತುಬಿಟ್ಟ. ಎಷ್ಟೊಂದು ಮೋಹಗೊಂಡನೆಂದರೆ ತನ್ನ ಪಾದುಕೆಗಳನ್ನು ಕಳಚುವುದಕ್ಕೂ ಮರೆತು ಬಿಟ್ಟನಂತೆ!

ಅದರಂತೆ ವೇತ್ರವತೀ ನದಿಯ ತೀರದಲ್ಲಿರುವ ಚಿಂತಾಮಣಿಯ ನರಸಿಂಹದೇವರನ್ನು (ಕೀ. ೧೪) ಕುರಿತ ಸ್ತುತಿಯೂ ಹೃದ್ಯವಾಗಿದೆ:

"ಪಾತಾಳದೊಳಗಿಂದ ಬಂದ ವರ ಚಿಂತಾಮಣಿ ನರಸಿಂಹ" ಎಂಬ ಸೊಲ್ಲಿನ ಮೂಲವು 'ತೀರ್ಥಪ್ರಬಂಧ'ದಲ್ಲಿದೆ. (ಭೂನ್ಯಸ್ತವಾಮಾಂಕಗವಾಮಪಾಣಿ ಮುತ್ಕ್ಷಿಪ್ತ ದಕ್ಷೋರುಗ ತಾನ್ಯ ಹಸ್ತಮ್। ಚಕ್ರಾಯುಧಂ ವೇತ್ರವತೀ ತಟಸ್ಥಂ ಚಿಂತಾಮಣಿಂ ಶ್ರೀ ನರಸಿಂಹ ಮೀಢೇ)

ಈ ಕೀರ್ತನೆಯಲ್ಲಿ 'ಕೋಲಾವತಾರದ ಹರಿಯ ದಿವ್ಯ ಲೋಲ ನೇತ್ರದಿ ಬಂದ ನದಿ' ಎಂಬ ಮಾತಿದೆ. ಇದು ದ.ಕ. ಜಿಲ್ಲೆಯಲ್ಲಿರುವ ನೇತ್ರಾವತಿ ನದಿಯ ಪೌರಾಣಿಕ ಹಿನ್ನೆಲೆಯನ್ನು ಕುರಿತದ್ದು. ವರಾಹ ಅವತಾರದ ಕಾಲದಲ್ಲಿ ಶ್ರೀಹರಿಯ ಕಣ್ಣಿನಿಂದ ಉದುರಿದ ಜಲಬಿಂದುಗಳಿಂದ ಉದ್ಭವಿಸಿದ ನದಿ - ಅರ್ಥಾತ್ ನೇತ್ರಾವತಿಯಾಗಿದೆ.

ರಾಮಾವತಾರದ ಶ್ರೀ ರಾಮಚಂದ್ರನನ್ನು ವರ್ಣಿಸುವಾಗ 'ಏಕ' (ಒಂದು) ಎಂಬ ವಿಚಾರವನ್ನು ಹಿಗ್ಗಿಸಿದ್ದಾರೆ. ರಾಮನ ವಚನ; ರಾಮನ ಬಾಣ, ಒಂದೇ ವರ; ಒಂದೇ ಪತ್ನಿ ಇವೆಲ್ಲ 'ಒಂದು' ಅಂಕಿಯ ಸದರಿನಲ್ಲಿ ಬರುವಂತಹವು. ಈ ಬಗೆಯ ಶ್ರೀರಾಮನ ವರ್ಣನೆ ಹೊಸತು.

ಕಾಂಚಿಯ ವರದರಾಜನ ಬಗ್ಗೆಯೂ ಇಂಥದೇ ಸೊಗಸಿನ ಕಲ್ಪನೆ ಮಾಡಿದ್ದಾರೆ. (ಕೀ. ೧೫) "ಅವನು ರಸಿಕಾಗ್ರೇಸರ, ಏಕೆಂದರೆ ಕಾಂತೆಯ ಒಡ್ಯಾಣದಲ್ಲಿ ಇರುವವ. ಕಾಂಚಿ ಎನ್ನುವುದಕ್ಕೆ ಒಡ್ಯಾಣ ಮತ್ತು ಕಾಂಚಿ ಊರು; ಎಂಬ ದ್ವ್ಯರ್ಥದ ಉಪಯೋಗ ಮಾಡಿಕೊಂಡಿದ್ದಾರೆ. ಇಲ್ಲಿಯೂ ತೀರ್ಥಪ್ರಬಂಧ'ದ 'ರಮ್ಯೋ ವರದರಾಜೋಯಂ ರಸಿಕಾಗ್ರೇಸರೇ ಧ್ರುವಮ್' ಎಂಬುದು ಆಕರವಾಗಿದೆ.

ಶ್ರೀಕೃಷ್ಣಸ್ತುತಿಯ ಎರಡು ಹಾಡುಗಳಲ್ಲಿ ನಾವೀನ್ಯವಿದೆ. ಶ್ರೀಕೃಷ್ಣ - ಗೋಪಿಯರ ಸಂಬಂಧವನ್ನು ಹರಿದಾಸರು ನಾನಾ ಬಗೆಯಲ್ಲಿ ವರ್ಣಿಸಿರುವರಷ್ಟೆ. ಗೋಪಿಯರು ಮಾಡಿಟ್ಟ ಬೆಣ್ಣೆ ಕದಿಯುವುದಾಗಲೀ, ಸೀರೆಯನ್ನು ಸೆಳೆಯುವುದಾಗಲೀ, ಯಾರಿಗೂ ಸಿಟ್ಟು ಬರಿಸುವಂತಹದು. ಆದರೆ ಗೋಪಿಯರು ಹಾಗೆ ಮಾಡಿಲ್ಲ ಎಂಬುದಾಗಿ ವಿಶ್ವೇಂದ್ರರು ತೃಪ್ತಿಯನ್ನು ಸೂಚಿಸಿದ್ದಾರೆ.

ಮುಂದಿನ ಹಾಡಿನಲ್ಲಿ ಬರುವ ಕೃಷ್ಣ - ಸುದಾಮರು ಇಪ್ಪತ್ತನೆಯ ಶತಮಾನದ ಆತ್ಮೀಯ ಸ್ನೇಹಿತರಂತೆ ಚಿತ್ರಿತರಾಗಿದ್ದಾರೆ.

"ಬಾರಪ್ಪಾ, ಸುದಾಮ ನನ್ನ ಅತ್ತಿಗೆ (ಸುದಾಮನ ಹೆಂಡತಿ) ಹೇಗಿದ್ದಾಳೆ? ನಿನ್ನ ಅತ್ತಿಗೆ( ರುಕ್ಮಿಣಿ) ಇಲ್ಲಿ ಚೆನ್ನಾಗಿದ್ದಾಳೆ! ಎಂಬ ಧರತಿಯಲ್ಲಿ ಹಾಡು ಮುಂದುವರಿಯುತ್ತದೆ. ಅವನು ಕೊಟ್ಟ ಹಿಡಿ ಅವಲಕ್ಕಿಯನ್ನು (ಪೃಥುಕ) ತಿನ್ನುವದಾದ ಮೇಲೆ ರುಕ್ಮಿಣಿ ಕೇಳುತ್ತಾಳೆ:

"ಈ ಪೃಥುಕದ ಮುಷ್ಟಿಗೆ ಮೋಕ್ಷವನ್ನೇ ಕೊಡುವಿ. ಇದಕ್ಕೂ ಹೆಚ್ಚು ತಿಂದರೆ ಮೋಕ್ಷಕ್ಕಿಂತ ಹೆಚ್ಚಿನದನ್ನು ಕೊಡಲೇಸಿದೆ?"

## ದೇವತಾಸ್ತುತಿ

ಇತ್ತ ಮಹಾಲಕ್ಷ್ಮಿಯನ್ನು ಸ್ತುತಿಸುವಲ್ಲಿ ಶ್ರೀ ಹರಿಯ ಸ್ತುತಿಯೆ ಒಡೆದು ತೋರುತ್ತದೆ. ಅವಳ ಯೌವನ ಕಿಂಚಿತ್ತೂ ಕೆಡಬಾರದೆಂಬ ಕಾರಣದಿಂದ, ಅವಳ ಉದರದಿಂದ ಮಕ್ಕಳನ್ನೂ ಪಡೆಯದೆ, ಹೊಕ್ಕುಳದಿಂದ ಹುಟ್ಟಿಸುತ್ತಾನೆ. (= ಬ್ರಹ್ಮನ ಜನನ). ಅವಳ ದೇಹಾಂಗಗಳನ್ನು ಆಭರಣಾದಿ ರೂಪದಿಂದ ಸದಾ ಆಲಂಗಿಸಿರುವವ, ಮಹಾಪ್ರಳಯ ಬಂದಾಗಲೂ ಲಕ್ಷ್ಮೀ ಸಹಿತನಾಗಿ ಇರುವವ, ಇತ್ಯಾದಿ. (ಕೀ. ೧೮)

ಬ್ರಹ್ಮದೇವರನ್ನು ಸ್ತುತಿಸುವ ದಾಸರ ಹಾಡುಗಳು ತೀರ ಕ್ವಚಿತ್ತಾಗಿ ಕಂಡು ಬರುತ್ತವೆ. ಶ್ರೀ ವಿಶ್ವೇಂದ್ರರ ಈ ಕುರಿತ ಹಾಡಿನಲ್ಲಿ ಬ್ರಹ್ಮದೇವರನ್ನು ಸುರರು ಅಸುರರೆಂಬ ಭೇದವಿರದೆ ಸರ್ವರಿಗೆ ವರವನ್ನು ಕೊಡುತ್ತಾನೆಂಬುದು ಮೋಜಿನದಾಗಿದೆ. (ಕೀ. ೧೯). ಈ ಬ್ರಹ್ಮದೇವರ ಪತ್ನಿ ಸರಸ್ವತಿ - ಗಿರಿಜೆಗೆ ಅತ್ತೆಯಾಗುವಳು. ಕಾರಣವೆಂದರೆ ಶಿವನು ಬ್ರಹ್ಮದೇವರ ಮಗನೆಂಬುದಾಗಿ ಪುರಾಣವೊಂದರಲ್ಲಿ ಉಕ್ತವಾಗಿದೆ.

ಅವತಾರತ್ರಯ - ಈ ಬಗ್ಗೆ ಎಲ್ಲ ಹರಿದಾಸರು ತಮ್ಮ ಕಲ್ಪನಾಚಾತುರ್ಯವನ್ನು ಹೊರಹೊಮ್ಮಿಸಿದ್ದಾರೆ. ಹನುಮ, ಭೀಮ, ಮಧ್ವ - ಈ ಮೂರು ಅವತಾರಗಳಲ್ಲಿ ವಾಯುದೇವರ ಕಾರ್ಯವನ್ನು ಅರ್ಥವತ್ತಾಗಿ ಕೊಟ್ಟಿದ್ದಾರೆ. (ಕೀ. ೨೦)

ವಾಯುದೇವರ ಪತ್ನಿಯಾದ ಭಾರತೀದೇವಿಯು ಇಲ್ಲಿ ಮಾತ್ರ ದ್ರೌಪದಿಯೆಂದೇ ಶೋಭಿಸಿದ್ದಾಳೆ. ಅದರಲ್ಲಿ ಬರುವ 'ಭೀಮನು ಶೂದ್ರನೆಂದಿರಲು ನೀನು ಶೂದ್ರೆಯೆನಿಸಿದಿ' ಎಂಬ ಉಕ್ತಿಗೆ ತುಸು ವಿವರಣೆ ಕೊಡಬೇಕು. ಅಜ್ಞಾತವಾಸದಲ್ಲಿ ಭೀಮಸೇನನು ವಲಲ - ಎಂದರೆ ಅಡಿಗೆಯವನಾದನಷ್ಟೆ. ಬ್ರಾಹ್ಮಣರೂ, ಕ್ಷತ್ರಿಯರೂ ಪಾಕ ವಿದ್ಯೆಯಲ್ಲಿ ತೊಡಗಬಾರದೆಂಬ ಶ್ರುತಿವಾಕ್ಯವಿದೆ. 'ಆದರೆ ಭೀಮಸೇನನು ಆ ಮಟ್ಟಿಗೆ ಶೂದ್ರನಾದನಲ್ಲವೆ? ಅಂತಾಗಿ ದ್ರೌಪದಿ 'ಶೂದ್ರೆ'!

ಶ್ರೀಹರಿಯ ದೇವತಾ ಪರಿವಾರದಲ್ಲಿ ಬರುವ ಶೇಷದೇವರೂ ಸ್ತುತಿಸಲ್ಪಟ್ಟಿದ್ದಾರೆ. (ಕೀ. ೨೩) ಲಕ್ಷ್ಮೀ ಸಹಿತ ವಿಷ್ಣುವು ಕ್ಷೀರ ಸಮುದ್ರದಲ್ಲಿ ಶೇಷಶಯನನಾಗಿರುವನಷ್ಟೆ. ಶೇಷನ ಹೆಡೆಯು ಬಾಗಿರುತ್ತ, ಅವನು ಅವರ ಪ್ರೇಮಭಾವವನ್ನು ಈಕ್ಷಿಸುವುದು ಅನಿವಾರ್ಯ. ಆ ನೋಟದಲ್ಲಿ ಭಕ್ತಿ ಭಾವವೆ ಇರಬಹುದು. ಆದರೇನು

ಸಮುದ್ರರಾಜನಿಗೆ, ತನ್ನ ಮಗಳು ಲಕ್ಷ್ಮಿಯನ್ನು ಬೇರೆಯವರು ಆ ಸ್ಥಿತಿಯಲ್ಲಿ ನೋಡುವುದು ಇಷ್ಟವಾಗಲಿಲ್ಲವೇನೊ. ತನ್ನ ಹಾಲಿನ ತೆರೆಯಿಂದ ಶೇಷನ ಕಣ್ಣುಗಳನ್ನು ಮುಚ್ಚಿಸಿದನಂತೆ! ಎಷ್ಟೊಂದು ರಮ್ಯವಾದ ಕಲ್ಪನೆ!

ವೈಷ್ಣವಾಗ್ರಣಿಯೆಂದು ಶಿವನನ್ನು ಹೊಗಳಿಯಾದ ಮೇಲೆ, ಪಾರ್ವತಿಯ ಸ್ತುತಿ ಬರುತ್ತದೆ. ಅವಳು ಮಹಾಲಕ್ಷ್ಮಿಯಂತೆಯೇ ತನ್ನ ಪತಿಯ ವಿಶೇಷ ಅನುರಾಗಕ್ಕೆ ಪಾತ್ರಳಾದವಳು. ಅದ್ಹೇಗೆ ಎನ್ನುವಿರ? ಅವಳ ಯೌವನಕ್ಕೆ ವಿಘ್ನ ಬಾರದೆಂದು 'ವಿಘ್ನ' ಹರನನ್ನೇ ಹುಟ್ಟಿಸಿದ. ಎರಡನೆಯ ಮಗನಂತೂ ಷಣ್ಮುಖ! ಒಂದಲ್ಲ ಆರು ಬಾಯಿಗಳಿಗೆ ಹಾಲುಣಿಸಬೇಕು. ಪಾರ್ವತಿಯ ಗತಿಯೇನು! ಅದಕ್ಕಾಗಿ ರುದ್ರದೇವರು ಆರು ಕೃತ್ತಿಕಾ ದೇವತೆಗಳಿಂದ ಮೊಲೆಯೂಡಿಸಿದ. (ಕೀ. ೨೬)

ಗಣಪತಿಯ ಸ್ತುತಿಯು ಮೇಲುನೋಟಕ್ಕೆ ಸರಳವಾಗಿ ಕಂಡರೂ ಅರ್ಥಗರ್ಭಿತವಾಗಿದೆ. ನಿನ್ನನ್ನು ಪೂಜಿಸಿದವರೆಲ್ಲ ಉದಾ.ಗೆ ಶ್ರೀರಾಮ, ಧರ್ಮಜ ಗೆದ್ದರು. ರಾವಣ, ದುರ್ಯೋಧನಾದಿಗಳು ಹಾಳಾದರು. (ಕೀ. ೨೮)

## ಯತಿಸ್ತುತಿ

ಇದಾದ ಅನಂತರ ಶ್ರೀ ವಿಶ್ವೇಂದ್ರತೀರ್ಥರು ಹಲವು ಯತಿಗಳನ್ನು ಸ್ತುತಿಸಿದ್ದಾರೆ. ಅವರಲ್ಲಿ ಜಯತೀರ್ಥರಿಗೆ ಮೊದಲ ಸ್ಥಾನ ಸಲ್ಲುತ್ತದೆ. ಯತಿವರೇಣ್ಯ ಶ್ರೀ ರಾಘವೇಂದ್ರರನ್ನೂ ಸ್ತುತಿಸಿದ್ದುದು ಒಂದು ವಿಶೇಷ.

ಹಾಗಿದ್ದರೂ ಸೋದೆ ಮಠದ ಯತಿಪರಂಪರೆಗೆ ಸ್ವಾಭಾವಿಕವಾಗಿಯೇ ಪ್ರಾಶಸ್ತ್ಯ. ಈ ಮಠದ ಆದ್ಯ ಪುರುಷರೂ

ಶ್ರೀ ಮಧ್ವಾಚಾರ್ಯರ ಬಂಧುವೂ ಆದ ಶ್ರೀ ವಿಷ್ಣುತೀರ್ಥರನ್ನೂ ಶ್ರೀ ವಾದಿರಾಜರಿಗೆ ಗುರುಗಳಾದ ಶ್ರೀ ವಾಗೀಶತೀರ್ಥರನ್ನೂ ನೆನೆದಿದ್ದಾರೆ.

ಶ್ರೀ ವಾದಿರಾಜರಂತೂ ವಿಶ್ವೇಂದ್ರತೀರ್ಥರ ಪರಮೋಚ್ಚ ಗುರುಗಳು. ಅವರ ಸಮಸ್ತ ಕೃತಿಗಳನ್ನು ಓದಿ ಆತ್ಮಸಾತ್ ಮಾಡಿಕೊಂಡವರು. ತಮ್ಮ ಕೀರ್ತನ ರಚನೆಯಲ್ಲಿ ಶ್ರೀ ವಾದಿರಾಜರನ್ನು ಪರೋಕ್ಷವಾಗಿ ಹಲವೆಡೆ ತಂದಿದ್ದಾರೆಂಬುದನ್ನು ನೋಡಿದ್ದೇವೆ. ಒಂದೆಡೆ ಅವರು 'ವ್ಯಾಸ-ದಾಸ ಕೂಟಗಳೆರಡರಲ್ಲೂ ರತ್ನ ಸ್ವರೂಪರು' - ಎಂದಿದ್ದಾರೆ. ಇಲ್ಲಿರುವ ಕೀರ್ತನೆಗಳಲ್ಲಿ (ಕೀ. ೩೫ - ೩೮) ಶ್ರೀ ಗುರುಗಳ ಜೀವನ ಸಾಧನೆಯ ಮುಖ್ಯ ಅಂಶಗಳೆಲ್ಲ ಬಂದಿವೆ. ಅನಂತರ ಕ್ರಮಪ್ರಾಪ್ತವಾಗಿ ಬರಬೇಕಾದವರು ಭೂತರಾಜರು ಮತ್ತು ವಾದಿರಾಜರ ಅನಂತರ ಪೀಠಸ್ಥರಾದ ಶ್ರೀ ವೇದವೇದ್ಯರು.

ಸೋದೆಮಠದಲ್ಲಿ ವಿಶೇಷ ಖ್ಯಾತರಾದವರು ಶ್ರೀ ವಿಶ್ವಪ್ರಿಯ ತೀರ್ಥರು. ಅವರು ಮಧ್ವಶಾಸ್ತ್ರವನ್ನು ಗುರುಮುಖದಿಂದ ಕಲಿತದ್ದರಿಂದ ಸೋದೆಯ ವೃಂದಾವನದೆದುರು ಕುಳಿತು ಜ್ಞಾನ ವೈರಾಗ್ಯಾದಿಗಳನ್ನು ಸಂಪಾದಿಸಿದವರಾದ್ದರಿಂದ ಅವರಿಗೆ ವೃಂದಾವನಾಚಾರ್ಯರೆಂಬ ಅಭಿಧಾನ ಸಂದಿತಲ್ಲವೆ. ಸಂಚಾರ ಹೋದಲ್ಲೆಲ್ಲ ಪ್ರಖ್ಯಾತರಾದರು. ಮೈಸೂರ ದೊರೆ ಮುಮ್ಮಡಿ ಕೃಷ್ಣರಾಜನು ಅವರಿಗೆ ರತ್ನಮಂಟಪವನ್ನು ಅರ್ಪಿಸಿದ್ದುದು, ಕೇರಳದ ರಾಜನು ಅವರಿಗೆ ವಿಶೇಷ ಸನ್ಮಾನವಿತ್ತುದಲ್ಲದೆ ವೈಷ್ಣವಭಕ್ತನಾಗಿ ಮಾರ್ಪಟ್ಟುದು - ಅವರ ಸ್ತುತಿಪರ ಕೀರ್ತನೆಯಲ್ಲಿ ವ್ಯಕ್ತವಾಗಿದೆ. (ಕೀ. ೪೨)

ಈ ವೃಂದಾವನಚಾರ್ಯರನ್ನು ಕುರಿತ ವಿಶೇಷ ಘಟನೆಯೊಂದಿದೆ. ಅದು ಅವರ ಪರ್ಯಾಯ ಕಾಲವಾಗಿದ್ದಿತು. ಸಂಜೆ, ಬ್ರಹ್ಮರಥದ ಮೇಲೆ ಎತ್ತರದಲ್ಲಿ ಪ್ರಭಾವಳಿಯ ಮೇಲೆ ಶ್ರೀಕೃಷ್ಣನ ಪ್ರತಿಮೆಯಿಟ್ಟು ಪರ್ಯಾಯಸ್ಥ ಸ್ವಾಮಿಗಳು ರಥವನ್ನೇರಿ ರಥಬೀದಿಯಲ್ಲಿ ಸುತ್ತು ಹಾಕುವ ಕಾರ್ಯಕ್ರಮವಿರುತ್ತದೆ. ಹಾಗೆ ರಥವು ಸಾಗಿದ್ದಾಗ ಒಮ್ಮೆಲೆ ರಥಕ್ಕೆ ಬೆಂಕಿ ಹತ್ತಿ 'ಧಗಧಗ ಉರಿಯತೊಡಗಿತು. ಮೇಲೆ ಸ್ವಾಮಿಗಳು! ಕೆಳಗಿದ್ದ ಎಲ್ಲರಿಗೂ ಗಾಬರಿ. ಆಗ ಸ್ವಾಮಿಗಳು ಪೀಠಾವಳಿ ಸಹಿತವಾಗಿ ರಥದ ಅಂಚಿಗೆ ಬಂದರು. "ವಾದಿರಾಜ ಗುರೋ! ನೀನೇ ಕಾಯಬೇಕು" ಎಂದು ಘೋಷಿಸುತ್ತ ಕೆಳಗೆ ಧುಮುಕಿದರು. ಜನರೆಲ್ಲ ಹಾಹಾಕಾರ ಮಾಡುತ್ತಿದ್ದಂತೆ, ವಿಶ್ವಪ್ರಿಯರು ನೆಲದ ಮೇಲೆ ಧೊಪ್ಪನೆ ಬಿದ್ದರು. ಆದರೆ ಏನೂ ನೋವು - ಗಾಯ ಆಗಿರಲಿಲ್ಲ!

ಶ್ರೀ ವಾದಿರಾಜರಲ್ಲಿ ಇರಿಸಿದ್ದ ಅಚಲ ಭಕ್ತಿ ಇದಕ್ಕೆ ಕಾರಣವೆನ್ನಬೇಕು. ಅಷ್ಟೊಂದು ಮಹಿಮಾನ್ವಿತರು!

ಅವರ ಅನಂತರ ಪೀಠಕ್ಕೆ ಬಂದ ವಿಶ್ವಾಧೀಶರೂ ಸಾಕಷ್ಟು ಹೆಸರು ಗಳಿಸಿದ್ದರು(ಕೀ. ೪೨). ಇಲ್ಲಿಯ ಅವರ ಕುರಿತ ಕೀರ್ತನೆಯಲ್ಲಿ ಇಂಗ್ಲಂಡಿನ ವಿಕ್ಟೋರಿಯಾ ರಾಣಿಯು ಇವರಿಗೆ ಪ್ರಶಸ್ತಿ ಕೊಟ್ಟಿದ್ದರ ಪ್ರಸ್ತಾಪವಿದೆ. ಆಗಿನ ಬೇರಾವ ಉಡುಪಿಯ ಸ್ವಾಮಿಗಳಿಗೆ ಈ ರೀತಿಯ - ಪ್ರಶಸ್ತಿ ಸಂದಿದ್ದ ಹಾಗೆ ತಿಳಿಯದು (ಹಾಗೇನಾದರೂ ಇದ್ದಿದ್ದರೆ ಆ ಮಠದವರು ಹೇಳುತ್ತಿದ್ದರೋ ಏನೊ). ೮ ಸೆಪ್ಟೆಂಬರ್ ೧೮೭೭ರಂದು ಕೊಡಲಾದ ಅದರ ಒಕ್ಕಣಿಕೆ ಇಂತಿದೆ :

(ಇದರ ಮೂಲಪ್ರತಿಯ ಛಾಯಾಚಿತ್ರವನ್ನು ಇಲ್ಲಿ ಕೊಟ್ಟಿದೆ.)

By command of His Excellency the Viceroy and Governer General in Council this Certificate is presented in the name of Her Most Gracious Majesty Queen Victoria, Empress of India, to -

M. R. RY. Vishwadhisha Thirt Swami Awargal of Sode Mutt, Son of Lakshminarayanacharya, in recognition of his encouragement of learning.

| | |
|---|---|
| Ootacumund, | Chief Secretary to |
| 8th September | the Government of |
| 1897 | Madras |

ಈ ಪ್ರಶಸ್ತಿಯನ್ನು ಶ್ರೀಗಳವರಿಗೆ ಕಳಿಸಿದವ ದ.ಕ. ಜಿಲ್ಲೆಯ ಆಗಿನ ಕಲೆಕ್ಟರನಾಗಿದ್ದ ಎಫ್. ಎ. ನಿಕಲ್ಸನ್ ಎಂಬಾತ. ಜೊತೆಗೆ ಇದೊಂದು ವಾಕ್ಯವನ್ನೂ ಸೇರಿಸಿದ್ದಾನೆ :

In sending you - this certificate I offer you my congratulations on the honour received by you at the hands of Government and express the hope that you will live long to enjoy the honour.

I have the honour to be Sir,<br>
Your most obedient Servant,<br>
*(signed)* Acting Collector

- ಬ್ರಿಟಿಶರು ಹೀಗೆ 'Your most Obedient Servant' ಎಂದು ಭಾರತೀಯರಿಗೆ ಹೇಳುತ್ತಿದ್ದ ಪ್ರಸಂಗಗಳು ತೀರ ಕ್ವಚಿತ್ತಾಗಿ ಇದ್ದುವು.

ಇದೇ ಹಾಡಿನಲ್ಲಿ ವಿಬುಧಪ್ರಿಯರೆಂಬ ಯತಿಗಳು ಶ್ರೀ ವಿಶ್ವಾಧೀಶರಲ್ಲಿ ನ್ಯಾಯಸುಧಾ ಮುಂತಾದ ಶಾಸ್ತ್ರಗಳನ್ನು ಅಭ್ಯಸಿಸಿ ಪಾರಂಗತರಾದರೆಂಬ ಮಾತಿದೆ. ಈ ವಿಬುಧಪ್ರಿಯರು

ಅದಮಾರು ಮಠದ ೨೯ನೆಯ ಪೀಠಾಧೀಶರು. ಉಡುಪಿಯ ಸಂಸ್ಕೃತ ಕಾಲೇಜಿಗೆ ಇವರದೇ ಪ್ರೇರಣೆ. ಹಲವಾರು ಕಿರಿಯ ಯತಿಗಳು ಇವರ ಶಿಷ್ಯರಾಗಿದ್ದರು. ಅವರ ಮಠವು ಒಂದು ಪ್ರಸಿದ್ಧ ವಿದ್ಯಾಕೇಂದ್ರವೇ ಆಗಿದ್ದಿತು.

ಇನ್ನೀಗ ಉಡುಪಿ ಮತ್ತು ಸೋದಾಕ್ಷೇತ್ರಗಳ ವರ್ಣನೆ. ಶ್ರೀ ವಿಶ್ವೇಂದ್ರರ ಎಂದಿನ ವಿರೋಧಾಭಾಸದ ಕ್ರಮ ಇಲ್ಲಿ ಸುರಮ್ಯವಾಗಿ ಬಂದಿದೆ. (ಕೀ. ೪೪, ೪೫)

ಉಡುಪಿಯು ಭೂವೈಕುಂಠವೆಂದು ಕರೆಯಿಸಿಕೊಳ್ಳುತ್ತಿದೆಯಲ್ಲವೆ. ಆದರೆ ಸ್ವರ್ಗಲೋಕದ ಆ ವೈಕುಂಠಕ್ಕೂ ಈ ಭೂ-ವೈಕುಂಠಕ್ಕೂ ಅವರು ಅಂತರವನ್ನು ಕಂಡಿದ್ದಾರೆ. ಹೋಲಿಕೆಯೂ ಇಲ್ಲದಿಲ್ಲ.

ಸ್ವರ್ಗ(ವೈಕುಂಠ)ದಲ್ಲಿ ಶ್ರೀಹರಿಯ ಅಷ್ಟಮಹಿಷಿಯರಿದ್ದರೆ<br>
ಇಲ್ಲಿ ಅಷ್ಟ ಯತಿಗಳಿದ್ದಾರೆ.<br>
ಅಲ್ಲಿಯ ಜನರೆಲ್ಲರಲ್ಲಿ ಹರಿಭಕ್ತಿ ಇದ್ದರೆ<br>
ಇಲ್ಲಿ ಎಲ್ಲಿ ನೋಡಿದರೂ ಭುಕ್ತಿ.<br>
ಅಲ್ಲಿ ಹೋದವರಿಗೆ ಇಲ್ಲ ಆಗಮನ.<br>
(ಅದು ಮೋಕ್ಷಪದವಾದ್ದರಿಂದ)<br>
ಇಲ್ಲಿ ಬಂದವರಿಗೆ, ಮರು ಜನ್ಮವಿಲ್ಲ.<br>
(ಏಕೆಂದರೆ ಈ ಪುಣ್ಯಕ್ಷೇತ್ರದಲ್ಲಿದ್ದವರಿಗೆ ಮುಕ್ತಿಯೇ ತತ್ಸಾಧನವಾಗುತ್ತದೆ).

ಇತ್ತ ಸೋದಾಕ್ಷೇತ್ರದ ವರ್ಣನೆಯಲ್ಲಿ ಬಂದ 'ಒಂದೇ ಸ್ಥಾನದಿ ಶ್ವೇತದ್ವೀಪ ಮತ್ತೆ ವೈಕುಂಠಾನಂತಾಸನಗಳು' ಎಂಬುದು ಸೋದೆಗೆ ಹೋಗಿ ಬರುವ ಯಾರಿಗೂ ಮನವರಿಕೆಯಾಗುವಂತಹದು.

ಶ್ರೀ ವಿಶ್ವೇಂದ್ರತೀರ್ಥರ ಕೀರ್ತನ ರಚನೆಯನ್ನು ಹೀಗೆ ಸಮಾರೋಪಗೊಳಿಸಬಹುದು. ಎದ್ದು ಕಾಣುವ ಲಕ್ಷಣವೆಂದರೆ ಸರಳ

ಸುಭಗತೆ. ಹಾಡಿನ ಯಾವ ಒಂದು ಚರಣವೂ ಅರ್ಥಕ್ಕೆ ಕಠಿಣವೆಂದು ಹೇಳುವಂತಿಲ್ಲ. ಅಲ್ಲದೆ ದ್ರಾಕ್ಷಾಪಾಕದಂತೆ ರಸಸ್ಯಂದಿಯಾದ ಅಂಶಗಳೇ ತುಂಬಿವೆ. ೧೯ನೆಯ ಶತಮಾನದ ಅನೇಕ ಹರಿದಾಸರುಗಳು ಭಾಷಾಶುದ್ಧತೆಗೆ ಸ್ಪಷ್ಟತೆಗೆ ಗಮನ ಕೊಡಬೇಕೆನ್ನುವ ಪ್ರಜ್ಞೆ ಇದ್ದವರಲ್ಲ. ಹೀಗಿರುತ್ತ ಇವರ ಹಾಡುಗಳ ಭಾಷೆ ಹಾಗೂ ವಿಚಾರ ಸರಣಿ ಮನಮೆಚ್ಚುವಂತಿದೆ.

ಈ ಯತಿವರ್ಯರ ಹಾಡುಗಳೆಲ್ಲ ದೇವ-ಗುರು ಸ್ತುತಿಪರವಾದವುಗಳು. ತತ್ವ ವಿವೇಚನೆ, ನೀತಿಬೋಧೆ ಮುಂತಾದ ಅಂಶಗಳು ಕಂಡುಬರುವುದಿಲ್ಲ. ಶಾಸ್ತ್ರಪಂಡಿತರಾಗಿದ್ದರೂ ಅದರ ಸೋಂಕು ಎಳ್ಳಷ್ಟೂ ತರದೇ ಕೀರ್ತನೆಗಳನ್ನು ರಚಿಸಿದ್ದು ಆನಂದಾಶ್ಚರ್ಯಕರವಾಗಿದೆ.

ಆದರೆ ಈ ಸ್ತುತಿಪರತೆಯಲ್ಲಿ ಏಕತಾನದ ನೀರಸತೆ ಇಲ್ಲ. ಕಾರಣವೆಂದರೆ ಅವರು ಬಹ್ವಂಶವಾಗಿ ವ್ಯಾಜ ನಿಂದಾಸ್ತುತಿ ಹಾಗೂ ಚತುರೋಕ್ತಿಗಳನ್ನು ತಂದಿರುವುದು. ಈ ಅಂಶವನ್ನು ಮೇಲಣ ಸಮೀಕ್ಷೆಯಲ್ಲಿ ತೋರಿಸಿದ್ದಾಗಿದೆ. ಕಲ್ಪಕತೆಯೂ ಇರುವುದರಿಂದ ವಾಚನ-ರೋಚಕವಾಗಿವೆ. ಅನುಪ್ರಾಸಾದಿ ಛಂದೋಗುಣಗಳಿಂದ ಗೇಯತೆಯೂ ಸಾಧಿಸಿದೆ.

ಕೊನೆಯದಾಗಿ ಹೇಳಿದರೂ, ಮಹತ್ವದ ಅಂಶವೆಂದರೆ ಶ್ರೀ ವಾದಿರಾಜ ಗುರುಗಳ ಬಗ್ಗೆ ಅವರಿಗಿದ್ದ ಅನನ್ವಿತವಾದ ಭಕ್ತ್ಯಾದರ ಭಾವ. ಅಲ್ಲದೆ ತೀರ್ಥಪ್ರಬಂಧ ಮೊದಲಾದ ಅವರ ಸಂಸ್ಕೃತ ಕೃತಿಗಳನ್ನು ಆತ್ಮಸಾತ್ ಮಾಡಿಕೊಂಡದ್ದು ಒಡೆದು ತೋರುತ್ತದೆ. ಶ್ರೀ ವಾದಿರಾಜ ಗುರುಗಳ ಕೃಪಾಕಟಾಕ್ಷ ಅವರ ಮೇಲೆ ಇದ್ದಂತೆ ನಮ್ಮಗಳ ಮೇಲೂ ಇರಲಿ.

ಶ್ರೀನಿವಾಸ ಹಾವನೂರ



ಹಾವನೂರಲ್ಲಿಯ
ಶ್ರೀ ವಾದಿರಾಜರ ಮೃತ್ತಿಕಾ ವೃಂದಾವನ.



BY COMMAND OF HIS EXCELLENCY THE VICEROY AND GOVERNOR-GENERAL IN COUNCIL THIS CERTIFICATE IS PRESENTED IN THE NAME OF HER MOST GRACIOUS MAJESTY QUEEN VICTORIA EMPRESS OF INDIA, TO M. R. RY. VISHWADISHA THIRTA SWAMI AVARGAL OF SODE MUTT, SON OF LAKSHMINARAYANACHARYA, IN RECOGNITION OF HIS ENCOURAGEMENT OF LEARNING.

| | |
|---|---|
| *Ootacamund 8th September 1891.* | Chief Secretary to the Government of Madras. |

ಸೋದೆಯ ಶ್ರೀ ವಿಶ್ವಾಧೀಶರಿಗೆ
ವಿಕ್ಟೋರಿಯಾ ಮಹಾರಾಣಿಯು
ಸಮರ್ಪಿಸಿದ ಪ್ರಶಸ್ತಿ ಪತ್ರ.



ಅರವತ್ತು ವರ್ಷಗಳ ಹಿಂದೆ ಶ್ರೀ ವಿಶ್ವೇಂದ್ರತೀರ್ಥರು ಇನ್ನಂಜೆಯಲ್ಲಿ ಸ್ಥಾಪಿಸಿದ್ದ,
ಇಂದಿನ ಶ್ರೀ ವಿಷ್ಣುಮೂರ್ತಿ ಹಯವದನ ಪದವಿಪೂರ್ವ ವಿದ್ಯಾಸಂಸ್ಥೆ.



ಶ್ರೀ ವಿಶ್ವೇಂದ್ರತೀರ್ಥರ ಮೂಲ ವೃಂದಾವನ
ಉದ್ಯಾವರ.

# ಕೀರ್ತನೆಗಳ ಪರಿವಿಡಿ



ಅನುಬಂಧಗಳು

# ೧. ಉದಯರಾಗ

ರಾಗ ಮೋಹನ, ಝಂಪೆತಾಳ

ಏಳಯ್ಯ ಮಹಾರಾಜ ಬೆಳಗಾಯಿತೇಳಯ್ಯ ||ಪ||

ಬಾಗಿಲಲಿ ಕೂಗುವರು ಸನಕಾದಿ ಮುನಿವರರು|
ನಾಗಭೂಷಣನು ಕೈಮುಗಿದು ನಿಂತ ||
ಜಾಗರವ ಮಾಡಿರ್ಪ ಸುರರೆಲ್ಲ ಬಂದಾಯ್ತು |
ಯೋಗಿಗಳು ಪೊಗಳುವರು ನಿನ್ನಂಘ್ರಿಯ ||೧||

ಲಂಕೆಯನು ಬಿಟ್ಟು ವಿಭೀಷಣನು ನಿಂತಿರ್ದ |
ಶಂಕೆಯನು ಬಿಟ್ಟೇಳು ಜಗದೀಶನೆ ||
ತಂಗಿಯನು ಬೇಡುವರೆ ಭಾವ ಪಾರ್ಥನು ಬಂದ |
ಮಂಗಳದ ನುಡಿ ನಿನಗೆ ಕೇಳಲಿಲ್ಲವೊ ಹರಿಯೆ ||೨||

ಪುಟ್ಟಾದ ಮುನಿ ಬಂದನಿಷ್ಟ ಭೀಮನು ಬಂದ |
ಥಟ್ಟನೆ ಏಳು ಯಾದವರಿಗರಸ ||
ಸೃಷ್ಟಿಗೊಡೆಯನೆ ಕೇಳು ಭೂಸುರನು ರುಗ್ಮಿಣಿಯ |
ಪುಟ್ಟಿವಾಲೆಯ ತಂದ ನೀ ನೋಡು ನೋಡು ||೩||

ಕೋಪಿಗಳರಸಾದ ದುರ್ವಾಸಮುನಿ ಬಂದ |
ಇಂಪಾಗಿ ಪಾಡುತಿಹ ಸುರಮುನಿಯು ಬಂದ ||
ಕೋಪದೊಳಗೊದೆದ ಮುನಿ ಬಂದ ಬೇಗೇಳು |
ಪುಷ್ಪಶರ ಮಗ ಬಂದ ಬೇಗೇಳು ರಂಗ ||೪||

ಸಿರಿದೇವಿ ನಿನ್ನಂಘ್ರಿಗಳನೊತ್ತಿ ಬಿಡಳೇನೊ ।
ಮಾರುತಿಯ ಜಪವಿನ್ನು ಮುಗಿಯಲಿಲ್ಲೊ ॥
ಕರುಣದಿಂದಲಿ ಕಾಯೋ ರಾಜೇಶ ಹಯಮುಖನೆ ।
ನರರೆಲ್ಲ ನಗುವಂತೆ ಮಾಡದಿರೊ ರಂಗ ॥೫॥

## ೨. ಹರಿಭಕ್ತಿ

ರಾಗ ಅಸಾವೇರಿ, ಛಾಪುತಾಳ

ದಾಸಗೆ ಭಯವೆಲ್ಲಿ। ವಾಸವನನುಜನ। ದಾಸಗೆ ಭಯವೆಲ್ಲಿ ||ಪ||

ದಾಸನಾಗದವಗೆ ಭಯವೆಂದಿಗೂ ತಪ್ಪದು ||
ದಾಸನಾಗಿಹಗೆ ಭಯವೆಂದಿಗೂ ಬಾರದು ||೧||

ತರಳ ಪ್ರಹ್ಲಾದಗೆ ಭಯವೆಂದಿಗೂ ಸೋಂಕಲಿಲ್ಲ ।
ತರಳನ ಪಿತಗೆ ಭಯವೆಂದಿಗೂ ತಪ್ಪಲಿಲ್ಲ ||೨||

ಲಂಕೆಯೊಳಿದ್ದರೂ ದಶಕಂಠನಿಗತಿ ಭಯ ||
ಲಂಕೆಯ ಬಿಟ್ಟ ವಿಭೀಷಣನಿಗಭಯ ||೩||

ಹರನ ಪೀಡಿಸಿದಾ ಭಸ್ಮಾಸುರಗೆ ಭಯ ||
ಹರಿಯ ಸ್ತುತಿಸಿದ ಮಹಾದೇವಗಭಯ ||೪||

ರಾಜಾಧಿರಾಜನಿಗೂ ಭಯವೆಂದೂ ತಪ್ಪದು ।
ರಾಜೇಶ ಹಯಮುಖನೊಲಿದವನಿಗಭಯ ||೫||

# ೩. ಹರಿಭಕ್ತಿ

ರಾಗ ಸಿಂಹೇಂದ್ರಮಧ್ಯಮ, ಝಂಪೆತಾಳ

ನಾನೇನ ಮಾಡಿದೆ ತಪ್ಪುಗಳನ್ನೆ ।
ನಾನೇನ ಮಾಡಿದೆ ದೇವರ ದೇವ ॥ಪ॥

ನಿನ್ನ ದಾಸರ ತಪ್ಪನೆಣಿಸದೆ ಪೊರೆಯುವೆ ।
ನಾನೊಬ್ಬ ದಾಸನೆಂದರಿತು ನೀ ಪೊರೆಯೊ ॥೧॥

ಭೃಗುವಂತೆ ನಿನ್ನಯ ಎದೆಗೆ ತುಳಿಯಲಿಲ್ಲ ।
ನಗವೈರಿಯಂತೆ ಯುದ್ಧವ ಮಾಡಲಿಲ್ಲ ॥೨॥

ಅಂಗಾಧಿಪತಿಯಂತೆ ಕೊಂದೆನೆಂದರಿತಿಲ್ಲ ।
ಗಂಗೆಯಾ ಸುತನಂತೆ ಫಣೆಗೆ ಹೊಡೆಯಲಿಲ್ಲ ॥೩॥

ನಿನ್ನಣ್ಣನಂತೆ ನೀ ವಂಚಿಸಿದಿಯೆಂದು ।
ನಿನ್ನ ಬಿಟ್ಟನ್ಯ ದೇಶಕೆ ಪೋಗಲಿಲ್ಲ ॥೪॥

ಭಾವ ಫಲ್ಗುನ ವಿಪ್ರಶಿಶುವ ಪಾಲಿಪೆನೆಂಬ ।
ಭಾವದಿ ನುಡಿದಂತೆ ನಿನಗೇನೂ ಪೇಳಿಲ್ಲ ॥೫॥

ನಿನ್ನಾ ಕುವರರು ಸುಭದ್ರೆಯ ಮದುವೆಯ ।
ಚೆನ್ನಾಗಿ ತಡೆದಂತೆ ತಡೆಯಲಿಲ್ಲವೊ ನಾನು ॥೬॥

ವಸುದೇವ ದೇವಕಿ ಮುಖರಂತೆ ನಿನ್ನ ಮಾ- ।
ನುಷನೆಂದು ನಾನೇನು ತಿಳಿದುಕೊಂಡಿಲ್ಲ ॥೭॥

ಮಲಗಿದ್ದ ಸಮಯವ ಕಂಡು ಬಲಿಯು ಬಂದು ।
ಮೌಲಿಯ ಕದ್ದಂತೆ ಕದ್ದುಕೊಂಡಿಲ್ಲ ॥೮॥

ರಾಜೇಶ ಹಯಮುಖ ಭಜಕರೊಳಗೆ ಮತ್ತೆ ।
ಋಜುಗಳಲ್ಲದೆ ನಿತ್ಯ ಭಕ್ತರಾರಿಹರು ॥೯॥

# ೪. ಅವತಾರಗಳು

ರಾಗ ಕಲ್ಯಾಣಿ, ಆದಿತಾಳ

ಹರಿ ಬಂದ ನರಹರಿ ಬಂದ ।
ಕರಿಯ ಮೋಚಿಸಿದ ಶಿರಿವರ ಬಂದ ॥ ॥ಪ॥

ದೇವ ಬಂದ ಪಾಂಡವರ ಭಾವ ಬಂದ ।
ಗೋವುಗಳ ಕಾವ ಕೃಪಾಸಿಂಧು ಬಂದ ॥೧॥

ಖ್ಯಾತ ಬಂದ ಪಾರ್ಥಸೂತ ಬಂದ ।
ವಾತಸುತ ಭೀಮಸೇನಪ್ರಿಯ ಬಂದ ॥೨॥

ಮುನಿ ಬಂದ ಜಾಮದಗ್ನ್ಯ ಬಂದ ॥
ಭಾನುಕೋಟಿಸುಪ್ರಕಾಶ ವ್ಯಾಸ ಬಂದ ॥೩॥

ರಾಜ ಬಂದ ದಶರಥಸುತ ಬಂದ ।
ತೇಜಿಯೇರಿ ಮೆರೆದ ಕಲ್ಕಿದೇವ ಬಂದ ॥ ॥೪॥

ಶ್ರೀಶ ಬಂದ ಮಹಿದಾಸ ಬಂದ ।
ಭಾಸುರಾಂಗ ದೇವ ಶ್ರೀನಿವಾಸ ಬಂದ ॥೫॥

ನೀಲ ಬಂದ ಬಾಲಕೃಷ್ಣ ಬಂದ ।
ಬಾಲ ಧ್ರುವರಾಯ್ಗೊಲಿದ ರಂಗ ಬಂದ ॥೬॥

ಕೋಲ ಬಂದ ಬಲಭದ್ರನ ತಮ್ಮ ಬಂದ ।
ರಾಜೇಶ ಶ್ರೀಹಯಮುಖ ದೇವ ಬಂದ ॥೭॥

# ೫. ಹಯಗ್ರೀವ ದೇವರು

ರಾಗ ಕಮಾಚ್, ಆದಿತಾಳ

ಕುದುರೆ ಕಂಡೀರ್ಯಾ ಬಿಳಿ ಕುದುರೆ ಕಂಡೀರ್ಯಾ ।
ಚೆಲುವ । ಕುದುರೆ ಕಂಡೀರ್ಯಾ ||ಪ||

ಮಧ್ವರಾಯರಿಗೊಲಿದ ಕುದುರೆ ।
ವಾದಿರಾಜರ ಪೊರೆದ ಕುದುರೆ ||
ಇಂದಿರಾದೇವಿಯನಪ್ಪಿದ ಕುದುರೆ ।
ಬಂದರೆ ನರರು ಬೆದರದಂಥ ಕುದುರೆ ||೧||

ಮಂದರಗಿರಿಯನ್ನೆತ್ತಿದ ಕುದುರೆ ।
ಚಂದಿರನಂತೆ ಪೊಳೆಯುವ ಕುದುರೆ ||
ಸೋದೆಯ ಪುರದೊಳಿರುವ ಕುದುರೆ ।
ಮೋದದಿಂದ ಮೆರೆಯುವ ಕುದುರೆ ||೨||

ಸುರಗಮೃತವನ್ನಿತ್ತ ಕುದುರೆ ।
ನರನ ರಥವನ್ನು ಏರಿದ ಕುದುರೆ ||
ಸ್ಮರನ ತಾತನೆನಿಪ ಕುದುರೆ ।
ಸುರತರುವನೆ ಭೂಮಿಗೆ ತಂದ ಕುದುರೆ || ||೩||

ಕಡಲೆ ಹೂರಣ ಮೆಲುವ ಕುದುರೆ ।
ಪಂಡರಪುರದಿ ಮೆರೆದ ಕುದುರೆ ||

ಪುಂಡರೀಕನಿಗೆ ಒಲಿದಿಹ ಕುದುರೆ ।
ಪಾಂಡವರನೆ ಪೊರೆದ ಕುದುರೆ ॥೪॥

ರಾಜನಾಥನೆನಿಪ ಕುದುರೆ ।
ವಾಜಿವದನ ತಾನೆನಿಪ ಕುದುರೆ ॥
ಕಂಜಸುತಗೆ ಶ್ರುತಿಯನ್ನಿತ್ತ ಕುದುರೆ ।
ಕಂಜನಾಭನೆನಿಪ ಕುದುರೆ ॥೫॥

## ೬. ದಶಾವತಾರ

ರಾಗ ಶಹನ, ಛಾಪುತಾಳ

ನಾನಾ ವೇಷಗಳಿನ್ನು ನಿನಗ್ಯಾಕೊ ಹರಿಯೆ ।
ನಿನ್ನ ಭಕ್ತರು ನಿನ್ನ ತಿಳಿಯದೆ ಬಿಡರು ||ಪ||

ಮೀನಾಗಿ ಜಲದೊಳು ತಿರುಗುವುದ್ಯಾಕೊ ।
ಜಾಣನೆಂದೆನಿಸಿ ಭಾರವ ಪೊತ್ತುದ್ಯಾಕೊ ||೧||

ಹಂದ್ಯಾಗಿ ದಿತಿಜನ ಬಡಿದೆ ನೀನ್ಯಾತಕೊ ।
ಕಂದನ ಪೊರೆಯೆ ಕಂಬದಿ ತೋರಿದ್ಯಾಕೊ ॥ ||೨||

ವಟುವಾಗಿ ಭೂಮಿಯ ಬೇಡಿದೆ ಏತಕೊ ॥
ಹಟವು ರಾಯರ ಮೇಲೆ ನಿನಗ್ಯಾಕೆ ಬೇಕೋ ||೩||

ಮಲತಾಯ ನುಡಿಗಾಗಿ ವನವಾಸ ನಿನಗ್ಯಾಕೊ ।
ಬಲದಿ ತಂದೆಯ ಬಂಧ ಬಿಡಿಸಿದ್ದು ಸಾಕೊ ॥ ||೪||

ರಾಜೇಶ ಹಯಮುಖ ಬತ್ತಲೆ ನಿಂತೆ ಏಕೊ ।
ತೇಜಿಯನೇರ್ದು ತೋರುವ ಶೌರ್ಯ ಸಾಕೊ ||೫||

# ೭. ಭೂವರಾಹದೇವರು

ರಾಗ ಶ್ರೀರಾಗ, ರೂಪಕತಾಳ

ಭೂವರಾಹ ಪಾಲಿಸೆನ್ನ ಶ್ಯಾಮಲಾಂಗ ಕಾಮತಾತ ||
ಪಾವಮಾನ ಕರಗಳಿಂದ ಸೇವ್ಯಮಾನ ಚಾರುಚರಣ ||ಪ||

ಧರೆಯನೆತ್ತಿ ತೊಡೆಯೊಳಿಟ್ಟು ಕರಗಳಿಂದಲಪ್ಪಿಕೊಂಬ |
ಕರುಣದಿಂದ ಸುರರಿಗಭಯವಿತ್ತ ದಿವ್ಯ ಕೋಲಮೂರ್ತಿ ||೧||

ಎರಡನೆಯ ಹಿರಣ್ಯಾಕ್ಷ ದೈತ್ಯನನ್ನು ಮಥಿಸಿದಂಥ |
ಧರಣಿಯಲ್ಲಿ ನರಕನನ್ನು ಜಯಿಸಿದಂಥ ಮಂಗಲಾಂಗ ||೨||

ದೇಶದೋಳ್ ಶ್ರೀಮುಷ್ಣವೆನಿಪ ಕ್ಷೇತ್ರದೊಳಗೆ ನೆಲಸಿದಂಥ |
ಶೇಷಶಿರದೊಳ್ ಚರಣವಿತ್ತ || ರಾಜನಾದ ಹಯಮುಖಾತ್ಮ ||೩||

## ೮. ಕಾಂಚಿಯ ಶ್ರೀ ವರದರಾಜ

ರಾಗ ಜಂಜೂಟಿ, ಆದಿತಾಳ

ವರದರಾಜ ಪಾಲಿಸೆನ್ನ ಧರಣಿಯೊಳ್
ನಿನ್ನಂಥ ರಸಿಕಾಗ್ರೇಸರ....ನ ವರದರಾಜ ಪಾಲಿಸೆನ್ನ ||ಪ||

ಕಾಂತೆಯ ಕಾಂಚಿಯೊಳಿರುವ ನಿನ್ನಯ
ಭಾವವರಿಯದ ರಸಿಕರಾರಿಹರು ||
ಪರಮಪುರುಷ ನಿನ್ನ ಚರಣ
ಸೇರಿದ ಭಕ್ತಜನರೆಲ್ಲ ರಸಿಕರಾಗಿಹರು ||೧||

ಅಜನ ಪೂಜೆಯ ಕೈಕೊಂಡಿರುವಿ।
ದ್ವಿಜವರರಿಗಿಷ್ಟವ ಪಾಲಿಸಿರುವಿ ||
ಅಜನ ನೀನೆಂದು ತೋರಿಸಿರುವಿ।
ಯಜ್ಞ ಭೋಜನವನು ಮಾಡುತಿರುವಿ || ||೨||

ಚೇತನಾಚೇತನಗಳಿಗೆ ಶ್ರೇಷ್ಠ ನರಸೂತ
ರಾಜೇಶ ಹಯಮುಖ ನಿನ್ನ ||
ವಾತವಿಧಿ ಹರ ಮುಖ್ಯರು ಭಜಿಸುತಲಿ ನಿತ್ಯ।
ಮುಕ್ತರಾದರು ಎಂದೊರೆವುದು ಶ್ರುತಿಯು ||೩||

## ೯. ಪಂಢರಪುರದ ಶ್ರೀ ವಿಟ್ಠಲ

ರಾಗ ಹಿಂದುಸ್ಥಾನಿ ಕಾಪಿ, ಆದಿತಾಳ

ಭೀಮಾನದಿ ತೀರಾವಾಸ ।

ಪಾಹಿ ಪಾಹಿ॥ ಪಾಂಡುರಂಗ ॥ಪ॥

ಜಾರಚೋರನೆಂಬರೆಂದು ।

ಗೋಕುಲವ ಬಿಟ್ಟು ಬಂದೆ । ಜಾರಚೋರನೆಂದು ನಿನ್ನ।

ಪುಂಡರೀಕ ಮುನಿ ಕರೆದ ॥ ಪಾಂಡುರಂಗ ॥೧॥

ಅನ್ಯಭೋಗಗಳನು ಬಿಟ್ಟು ।

ನಿನ್ನ ಪಾದವ ಧ್ಯಾನಿಸುವರ । ಮನದಿಷ್ಟನೀವೆನೆಂದು।

ತೋರಿಸುವೀ ಚಿಹ್ನೆಯಿಂದ ॥ ಪಾಂಡುರಂಗ .॥೨॥

ರಾಜೇಶ ಶ್ರೀ ಹಯಮುಖ । ಜ್ಞಾನಶೂನ್ಯಾರ್ತರ್ಗೆ ಸಾ -

ಯುಜ್ಯವಿತ್ತು ಪೊರೆವ ವಿಠಲ । ನೆಂದು ಭೂಮಿಯೊಳು ಮೆರೆವ

॥ ಪಾಂಡುರಂಗ ॥೩॥

## ೧೦. ತಿರುಪತಿಯ ಶ್ರೀವೆಂಕಟೇಶ

ರಾಗ ಹಿಂದುಸ್ಥಾನಿ ಕಾಪಿ, ಆದಿತಾಳ

ತಿರುಪತಿ ವೆಂಕಟರಮಣ ನೀನು ।
ಧರಣಿಯೊಳ್ಸರ್ವರಿಗಧಿಕ ।
ತಿರುಪತಿ ವೆಂಕಟರಮಣ ||ಪ||

ಸ್ವಾಮಿಪುಷ್ಕರಿಣಿಯ ತಟದಿ ।
ವಾಸ ಮಾಡಿಕೊಂಡಿರುವೆಯೊ ನೀನು ||
ಭೂಮಿಯೊಳಗೆಲ್ಲ ಸಾಧುಸಜ್ಜನರು ।
ನೇಮದಿಂದಲಿ ನಿನ್ನ ಸೇವಿಪರು ||೧||

ಮಂಜುಗಣಿಯ ಪುರದೊಳಗೆ ಬಂದು ।
ನಿಂದಿರುವಿ ವೆಂಕಟೇಶ ||
ಕಂಜಾಕ್ಷ ವರ ಚಕ್ರ ಶಂಖ ಮತ್ತೆ
ಶರಚಾಪಗಳನೆತ್ತಿ ಮೆರೆದೀ ||೨||

ಜಗಕೆಲ್ಲ ಶೇಷಾದ್ರಿಯಂಥ ।
ಕ್ಷೇತ್ರವಿಲ್ಲೆಂದು ತೋರುತಿರುವಿ ||
ಖಗವರನನ್ನೇರಿ ತಿರುಗಿ ಬಂದು ।
ತಿರುಪತಿ ಕ್ಷೇತ್ರದೊಳಿರುವಿ ||೩||

ವಾದಿರಾಜರು ನಿನ್ನ ಬಳಿಗೆ ।
ಪಾದ ಮುಟ್ಟದೆ ಜಾನುಗಳಿಂದ ॥
ಬಂದು ಸಾಲಿಗ್ರಾಮದ ಮಾಲೆಯನ್ನು ।
ಪಾದಕರ್ಪಿಸಿ ಸ್ತುತಿಸಿದರು ನಿನ್ನ ॥೪॥

ಆಕಾಶರಾಜನ ಮಗಳು ಬಂದು ।
ರಾಜೇಶ ಹಯಮುಖ ನಿನಗೆ ॥
ಮಾಲೆ ಹಾಕುತ ಮುಂದೆ ನಿಂದಳು ।
ಶಂಕೆಯಿಲ್ಲದೆ ನಮಿಸಿದಳು ಮುದದಿ ॥೫॥

## ೧೧. ಶ್ರೀ ವೇದವ್ಯಾಸರು

ರಾಗ ಹಿಂದುಸ್ಥಾನಿ ಕಾಪಿ, ರೂಪಕತಾಳ

ವೇದವ್ಯಾಸಮೂರುತೀ ಬದರಿಯೊಳಗಿರುತಿ ।
ಮೇದಿನಿಯೊಳ್ ನಿನ್ನ ಕೀರುತಿ ಪಸರಿಸುತಿರುತಿ ॥ಪ॥

ಮಧ್ವಮುನಿಗಾನಂದದಿ ವೇದ ಶಾಸ್ತ್ರಾಂಬುಧಿಯೊಳು ।
ಇಂದಿಗಾಯ್ತೊಂಭತ್ತು ಶತವು ಚಂದದಿಂ ವತ್ಸರಗಳು ॥೧॥

ಕೀಟದಿಂದ ರಾಜ್ಯಭಾರ । ವಾಟದಂತೆ ನಡೆಸಿದಿ ।
ಪುಟ್ಟತನದಿ ಮಾತೆಗೊಲಿದು । ಶ್ರೇಷ್ಠ ನೀನೆಂದೆನಿಸಿದಿ ॥೨॥

ರಾಜಧರ್ಮತನಯನಿಂದ । ರಾಜಸೂಯ ನಡೆಸಿದಿ ।
ರಾಜನಾಥ ಹಯಮುಖ ನೀ । ಮೂಜಗದಿ ಮೆರೆಯುತಿ ॥೩॥

# ೧೨. ತ್ರಿವಿಕ್ರಮದೇವರು

ರಾಗ ವಸಂತ, ಆದಿತಾಳ

ದೇವಾದಿದೇವ ಶ್ರೀತ್ರಿವಿಕ್ರಮರಾಯ
ದ್ಯಾವಾಭೂಮಿಗಳಮ್ಯಾಲ್ನಿನ್ನ ಕಾಯ ॥
ಪಾದನಖಾಗ್ರದಿ ಬ್ರಹ್ಮಾಂಡವನ್ನು ।
ಭೇದಿಸಿ ಗಂಗೆಯ ಜನಿಸಿರ್ದ ಕಾಯ ॥ಪ॥

ಅಣುರೂಪದಿಂದಿದ್ದು ಕ್ಷಣದೊಳಗದ್ಭುತ ।
ರೂಪವ ಧರಿಸಿ ಬಲಿಯ ಬಂಧಿಸಿದಿ ॥
ರಣಶಬ್ದವಿಲ್ಲದೆ ಸರ್ವಸಾಮ್ರಾಜ್ಯವ - ।
ನಗ್ರಜಗಿತ್ತಿಹ ಕಾರ್ಯವಾಶ್ಚರ್ಯ ॥೧॥

ವಾದಿರಾಜರಿಗೆ ನೀ ಒಲಿದು ಶ್ರೀಸೋದೆಯೊಳ್
ನಿಂತಿದ್ದ ತೆರವತಿ ಚೋದ್ಯವಾಗಿಹುದು ।
ಕದನವಾಗಿಲ್ಲ ಭೂಭುಜರಲ್ಲಿ ಒಲಿದುದು।
ಹರಿಭಕ್ತರ್ಗತಿ ತೋಷಕಾರ್ಯ ॥೨॥

ಕಂಜಾಕ್ಷಶ್ರೀಕೃಷ್ಣಗೋಲೆಯರ್ಪಿಸಿದ ।
ರಾಜೇಶಹಯಮುಖದಾಸರೆಂದೆನಿಪ ॥
ರಾಜ್ಯದೊಳಗತಿಮಾನ್ಯ ವಾದಿರಾಜರ ಭಾಗ್ಯ ।
ದೇವಾದಿದೇವ ಶ್ರೀತ್ರಿವಿಕ್ರಮರಾಯ ॥೩॥

# ೧೩. ಉಂಡಾರುವಿನ (ಜನಾರ್ದನ) ವಿಷ್ಣುಮೂರ್ತಿ

ರಾಗ ಭೈರವಿ, ಝಾಪುತಾಳ

ವಿಷ್ಣುಮೂರ್ತಿಯೆ ಪಾಹಿ ಭುಕ್ತಿಪುರೇಶ ।
ಜಿಷ್ಣುನಂದನಸೂತ ವೃಷ್ಣಿಕುಲೇಶ ||ಪ||

ಮೃಷ್ಟಾನ್ನಭೋಜನವಿತ್ತ ಸಜ್ಜನರಿಗೆ ।
ಕಷ್ಟವ ಪರಿಹರಿಸೀಷ್ಟವ ಕೊಡುವಿ ।
ಶ್ರೇಷ್ಠನಾನೆಂಬುವ ಹೆಮ್ಮೆಯುಳ್ಳವರಿಗೆ ।
ಇಷ್ಟವ ಕೊಡದೇನೆ ದೂರ ಕೂಡಿಸುವಿ ||೧||

ಆರ್ತನಾಗುತ ನಿನ್ನ ಪಾದವ ಸೇರಿದ ।
ಭಕ್ತರಭೀಷ್ಟವ ಪೂರ್ತಿಗೊಳಿಸುವಿ ।
ಶಕ್ತ ಅಶಕ್ತನು ಎಂಬ ಭೇದಗಳಿಲ್ಲ ।
ಭಕ್ತನೆಂದರೆ ಸಾಕು ಪಾಲಿಸುತಿರುವಿ ||೨||

ಬಾಲಕನಾದರು ಕೊಟ್ಟ ನೈವೇದ್ಯವ ।
ಆಲಸ್ಯವಿಲ್ಲದೆ ಸ್ವೀಕರಿಸಿರುವಿ ।
ಬಾಲಕ ಪಿತ ಬಂದು ಪಾತ್ರವ ಕೇಳಲು ।
ಜಲದೊಳಗುಂಟೆಂದು ಸ್ವಪ್ನದಿ ನುಡಿದಿ ||೩||

ಬೇಸಿದ ಮಾವಿನ ಫಲದೊಳು ಪ್ರೇಮವೊ ।
ಬಾಲನ ನುಡಿಯೊಳಗಾಯ್ತೇನೊ ಪ್ರೇಮ ।
ದಾಸರೊಳ್ಳಿನಗಿಪ್ಪ ಪ್ರೇಮವ ಜಗಕೆಲ್ಲ ।
ಬಾಲನಿಂದಲಿ ತೋರ್ದೆ ವಿಷ್ಣುಮೂರುತಿಯೆ ॥ ॥೪॥

ರಾಜೇಶ ಹಯಮುಖ ಕಿಂಕರಾಗ್ರಣಿ ವಾದಿ – ।
ರಾಜರಾಯರಿಗಿಷ್ಟವಿತ್ತು ಪಾಲಿಸಿದಿ ।
ಇಷ್ಟದ ಶಿಶುಗಳು ಬೇಡದಿದ್ದರು ಮಾತೆ ।
ಇಷ್ಟವಿತ್ತಂತೆ ನೀ ಪೊರೆಯುವ ಧೊರೆಯು ॥೫॥

## ೧೪. ಚಿಂತಾಮಣಿಯ ಶ್ರೀನರಸಿಂಹ

ರಾಗ ರೀತಿಗೌಳ, ಝಂಪೆತಾಳ

ಪಾತಾಳದೊಳಗಿಂದ ಬಂದ । ವರ ಚಿಂತಾಮಣಿ ನಾರಸಿಂಹ
ಪಾಹಿ ಕರುಣಾಸಾಗರ ಶ್ರೀಹರಿಯೆ ॥ಪ॥

ಯೋಗಿನೀ ಗಣಗಳ ಕೊಂದು । ನಾಗಭೂಷಣನಿಗೊಲಿದಂಥ ॥
ರಾಗಾದಿ ದೋಷವಿದೂರರ ।
ರಾಗದಿಂದಲಿ ಪಾಲಿಸುತಿರುವಿ ಧೊರೆಯೆ ॥೧॥

ಕೋಲಾವತಾರದ ಹರಿಯ ದಿವ್ಯ । ಲೋಲ ನೇತ್ರದಿ ಬಂದ ನದಿಯ ॥
ವೇಲೆಯೊಳಗಿದ್ದು ಶೋಭಿಸುವ ವನ - ।
ಮಾಲಾದಿ ಭೂಷಿತನಿರುವಿ ॥ ॥೨॥

ಬಾಲಗೊಲಿದೆ ಕಂಬದಲ್ಲಿ ಮತ್ತೆ । ಶೂಲಿಗೊಲಿದೆ ಪಾತಾಳದಲ್ಲಿ ॥
ಚೆಲ್ವ ರಾಜೇಶ ಹಯಮುಖ ಹರಿಯೇ ನಿನ್ನ ।
ಬಲ್ಲಿದ ಜನರಿಗೆ ಸುಲಭ ॥ ॥೩॥

# ೧೫. ಶ್ರೀ ರಾಮಚಂದ್ರ

ರಾಗ ಭೈರವಿ, ತ್ರಿಪುಟತಾಳ

ಪಾಲಿಸೋ ಪಂಕಜನೇತ್ರ ರಘು-
ಕುಲಾಂಬುಧಿಚಂದ್ರ ಶ್ರೀರಾಮಚಂದ್ರ ||ಪ||

ಒಂದೇ ಭಾಷಣ ನಿನಗೊಂದೇ ಮಾರ್ಗಣ ಸಾಕು ।
ಒಂದೇ ಸ್ಥಾನದೊಳಾಶ್ರಿತರನೇ ನಿಲ್ಲಿಸುವಿ।
ಒಂದೇ ಬಾರಿಯೆ ಕೊಟ್ಟುದ್ಧರಿಸುವಿ ಭೃತ್ಯರ ।
ಒಂದೇ ಪತ್ನಿಯು ನಿನಗೆಂಬುದು ಬಿರುದು || ||೧||

ನಿನ್ನ ತಮ್ಮನು ನಿನ್ನ ರಾಣಿಯ ಭೃತ್ಯನು ।
ನಿನ್ನಂಥ ಭಾಗ್ಯ ಮತ್ತೆಲ್ಲಿ ತೋರುವುದು ||
ಘನ್ನ ಮಹಿಮ ನೀನು ಮಲತಾಯಿ ನುಡಿಯಲು ।
ತನ್ನ ರಾಜ್ಯಗಳನ್ನು ತಮ್ಮನಿಗೊಪ್ಪಿಸಿದಿ ||೨||

ಭರತನು ನಿನ್ನಡಿಗೆರಗಿ ಬೇಡಿದರೂ ನೀ ।
ಹರುಷದಿಂದಲಿ ಕಾಲಾಂತರವ ಪೇಳಿರುವಿ ।
ಮರಳಿ ರಾಜ್ಯದಿ ಬಂದು ರಾಜೇಶ ಹಯಮುಖ ।
ಕರುಣಿಸಿ ಪಟ್ಟಾಭಿಷಿಕ್ತನಾಗಿರುವಿ ||೩||

## ೧೬. ಶ್ರೀ ಕೃಷ್ಣ

ರಾಗ ಪೀಲು, ಏಕತಾಳ

ಉದ್ಧವಾ ಬೇಗ ಬಾ । ಬಾ ।
ಶ್ರದ್ಧೆಯಿಂದಿರ್ಪರೆ ಗೋಪಿಯರೆನ್ನೊಳು ||ಪ||

ಕಾಳಿಯ ಫಣದಲಿ ಮೋದದಿಂ ಕುಣಿಯಲು ।
ಸಾಲುಸಾಲಾಗಿಯೇ ತವಕದಿಂ ನಿಂತರು ||೧||

ಬೆಣ್ಣೆಯ ಕದ್ದರು ಸಣ್ಣ ಮಾತಾಡರು ।
ಕಣ್ಣು ಕೆಂಪಾಗಿ ತಾವೆಂದಿಗು ನುಡಿಯರು || ||೨||

ಸುಂದರಾಂಗಿಯರಾ ಸೀರೆಯ ಸೆಳೆದರು ।
ನಂದನೊಳೆನ್ನಯ ಸುದ್ದಿಯ ಪೇಳರು ||೩||

ತರುವ ನಾನೇರ್ದರು ಸೀರೆಯ ಕದ್ದರು ।
ಕರಗಳ ಜೋಡಿಸಿ ಬೇಡುತ್ತ ನಿಂತರು ||೪||

ಪತಿಗಳ ಶಿಕ್ಷೆಯನ್ನೀಕ್ಷಿಸದೆನ್ನೊಳು ।
ರತಿಸುಖಾಂಬುಧಿಯಲ್ಲಿ ತೇಲಿಕೊಂಡಿರ್ದರು ||೫||

ಭಜಿಸಿ ರಾಜೇಶನ ಹಯಮುಖ ದೇವನ ।
ತ್ಯಜಿಸಿ ಶೋಕಂಗಳ ಸುಖಿಗಳಾಗಿರ್ಪರೆ ||೬||

## ೧೭. ಶ್ರೀಕೃಷ್ಣ

ರಾಗ ಬೇಹಾಗ್, ಆದಿತಾಳ

ಬಾರೊ ಸುದಾಮ ಬಾರೆನ್ನ ಮಿತ್ರ ।
ದಾರಿ ನಮ್ಮಲ್ಲಿಗೆ ತೋರಲಿಲ್ಲೇನೊ ||ಪ||

ನಿನ್ನಯ ಪತ್ತೆಯು ಸಿಕ್ಕಲಿಲ್ಲೆನಗೆ ।
ಎನ್ನಯ ಪತ್ತೆಯು ನಿನಗತಿ ಸುಲಭ ||
ಎನ್ನತ್ತಿಗೆ ಕ್ಷೇಮದಿಂದಿರುವಳೆ ಪೇಳೊ ।
ನಿನ್ನತ್ತಿಗೆ ಕ್ಷೇಮದಿಂದಿರುವಳು ಕೇಳು ||೧||

ಸತಿಸುತರಸು ಕಾಣದುಂಟೇನೊ ಚಿಂತೆ ।
ಸತಿಸುತರನಿಲ್ಲಿ ಕರೆಸುವ ಕಾಣೊ ||
ನೀ ತಂದ ಒಡವೆಗಳೇನೇನು ತೋರೊ ।
ಪೃಥುಕದ ಗಂಟನೆ ಬಿಚ್ಚೊ ನೀ ಬೇಗ || ||೨||

ಪೃಥುಕೈಕಮುಷ್ಟಿಯ ತಿಂದಾಗುತಿರಲು ।
ಕ್ಷಿತಿಪತಿ ಕರವನೆ ಪಿಡಿದಳು ಭೈಷ್ಮೀ ||
ಪೃಥುಕದ ಮುಷ್ಟಿಗೆ ಮೋಕ್ಷವ ಕೊಡುವಿ ।
ಮತ್ತಿನ್ನು ತಿಂದರೆ ಕೊಡುವುದೇನರಸ ||೩||

ತಟ್ಟಿ ಮುದ್ದಾಡಿ ಸುದಾಮನ ಬಿಡನು ।
ಕಷ್ಟವನರುಹಲು ತಿಳಿಯದು ಹರಿಗೆ ॥
ಪುಟ್ಟಾದ ಮಕ್ಕಳ ಬಿಟ್ಟು ಬಂದಿರುವಿ ।
ಕಷ್ಟವು ನಿನಗೇನೊ ಮಿತ್ರ ನಾನಿರಲು ॥ ॥೪॥

ರಾಜೇಶ ಹಯಮುಖ ಚರಣಾಬ್ಜಗಳನು ।
ಭಜಿಸುತ್ತ ನೀ ಪೋಗು ಮರೆಯದೆ ಮಿತ್ರನ ॥
ತ್ಯಜಿಸುತ್ತಲಿರುವಿ ನೀ ವಿಷಯದ ಸುಖವ ।
ಮೂಜಗದೊಳಗಿಂಥ ಮಿತ್ರನೆಲ್ಲಿಹನು ॥೫॥

## ೧೮. ಮಹಾಲಕ್ಷ್ಮಿ

ರಾಗ ಬಿಲಹರಿ, ಝಂಪೆತಾಳ

ದೇವಿ ಇಂದಿರೆ ನಿನ್ನೊಳ್ ದೇವ ಶ್ರೀಹರಿಗಿಪ್ಪ ।
ಪ್ರೇಮವ ಬಣ್ಣಿಸಲಸದಳ ಕಂಡ್ಯ ॥ಪ॥

ಜಕ್ಕ ಜವ್ವನ ಪೋಗಬಾರದೆಂದೆನುತಲಿ ।
ಮಕ್ಕಳ ನಿನ್ನೊಳು ಜನಿಸನು ಕಂಡ್ಯ ॥
ಪೊಕ್ಕಳೊಳಗೆ ತಾನೆ ಮಕ್ಕಳ ಪುಟ್ಟಿಸಿದ ।
ಅಕ್ಕರೆಯನು ಶ್ರೀದೇವಿ ನೀ ಕಂಡ್ಯ ॥೧॥

ಉರದೊಳು ತೊಡೆಯೊಳು ಕೊರಳೊಳಾಭರಣದೊಳ್ ।
ಕರಗಳಿಂದಲಿ ಪಾರ್ಶ್ವದೊಳಗಾಲಿಂಗಿಸಿದಾ ।
ನೀರೊಳಕ್ರೂರಗೆ ಒಲಿಯುವಾಗಲು, ಮಹಾ ।
ಪ್ರಳಯದಿ ನಿನ್ನನು ಬಿಡನು ॥೨॥

ರಾಜಾಧಿರಾಜರು ಬಹು ದಾರರೆಂಬರು।
ರಾಜೀವಾಕ್ಷನಿಗೆ ನೀನೊಬ್ಬಳೆ ಕಂಡ್ಯ॥
ರಾಜೇಶಹಯಮುಖನಂಥ ಪ್ರೇಮಿಗಳುಂಟೆ ।
ರಾಜೇಶ ಶ್ರೀರಾಮನರಸೀಯೊಬ್ಬಳೆ ಕಂಡ್ಯ ॥೩॥

## ೧೯. ಬ್ರಹ್ಮದೇವರು

ರಾಗ ಕಾಂಭೋಜ, ಝಂಪೆತಾಳ

ಚತುರವದನಗೊಂದಿಸುವೆನು ।
ಮದನನಯ್ಯನ ಜ್ಯೇಷ್ಠಕುವರ ।
ಚತುರವದನಗೊಂದಿಸುವೆನು ॥ಪ॥

ಜಗವ ಸೃಷ್ಟಿಪ ಗುರುವರನ ಮೂ- ।
ಜಗದೊಡೆಯನ ನಿತ್ಯನೋಡುತಿಹನ ॥
ನಗವೈರಿಮುಖಸುರ ಪ್ರಿಯನ ।
ನಿಗಮೋಕ್ತ ಯಾಗ ಮಾಡುವನ ॥೧॥

ಸುರರು ಅಸುರರೆಂಬ ಭೇದ- ।
ವಿರದೆ ಸರ್ವರಿಗಿಷ್ಟವೀವವನೆ ।
ಪುರಹರಾದ್ಯಖಿಲಾಮರರು ನಿನ್ನ ।
ಸ್ಮರಿಸುತಾಜ್ಞೆಯ ಧರಿಸುವರು ॥೨॥

ಯಜ್ಞಕುಂಡದೊಳುದ್ಭವಿಸಿದ ಸ- ।
ರ್ವಜ್ಞ ರಾಜೇಶ ಹಯಮುಖ ।
ಸುಜ್ಞಾನ ವೇದಾರ್ಥಗಳನು ಬೋಧಿಸಿಪ್ಪಸಾ- ।
ಯುಜ್ಯವ ನಿನಗೆ ಕೊಟ್ಟಿಹನು ॥೩॥

## ೨೦. ವಾಯುದೇವರ ಅವತಾರತ್ರಯ

### ರಾಗ ಕಮಾಚ್, ಆದಿತಾಳ

ಕಾಯೋ ಪ್ರಾಣೇಶ ಕೀಶಕುಲೇಶ ।
ವಾಯುಸುತನೆಂದು ಮೆರೆವ ಜೀವೇಶ ||ಪ||

ಅಂಜನಾದೇವಿಯೊಳ್ ಜನಿಸಿಕೊಂಡಿರುವಿ ।
ಅಂಜದೆ ಲಂಕೆಗೆ ಬೆಂಕಿ ಹಚ್ಚಿರುವಿ ।
ಸಂಜೀವನವ ತಂದು ಕಪಿಗಳನುಳಿಸಿದಿ ।
ಕಂಜಾಕ್ಷಿ ಸೀತೆಗುಂಗರವ ತಂದಿತ್ತೆ ||೧||

ಕುಂತೀದೇವಿಯ ಗರ್ಭದೊಳಗುದ್ಭವಿಸಿದಿ ।
ಪಾರ್ಥರೊಳ್ನೀನಗ್ರಗಣ್ಯನೆಂದೆನಿಸಿ ।
ಪಂಥದಿ ಮಗದಾಧಿಪತಿಯ ಸಂಹರಿಸಿ ।
ಕಾಂತೆಯ ತಲೆಯ ಕೂದಲನೆ ಕಟ್ಟಿಸಿದಿ ||೨||

ಪಾಜಕ ಕ್ಷೇತ್ರದೊಳ್ ನೀನವತರಿಸಿ ।
ರಾಜತಾಸನದಿ ಶ್ರೀಕೃಷ್ಣನನಿರಿಸಿ ||
ರಾಜೇಶ ಹಯಮುಖ ಕಿಂಕರನೆನಿಸೀ ।
ಮೂಜಗದಲಿ ಶ್ರೇಷ್ಠ ಗುರು ನೀನೆಂದೆಣಿಸಿ ||೩||

## ೨೧. ಸರಸ್ವತಿ ದೇವಿ

ರಾಗ ಸರಸ್ವತಿ, ಝಂಪೆತಾಳ

ವಾಣೀ ವೀಣಾಪಾಣಿ ಬ್ರಹ್ಮನ ರಾಣಿ
ಪಾಹಿ ಕಿಂಕರ ಪಾಪಕೃಪಾಣೀ ||ಪ||

ಖ್ಯಾತೇ ವೇದಮಾತೇ । ನಾಗಭೂಷಣ ಮಾತೇ ।
ಮಾಲಾ ಪುಸ್ತಕ ಶೋಭಿತಹಸ್ತೇ ||೧||

ಭವ್ಯೇ ಭವ್ಯಕೃತ್ಯೇ ಭವ । ಮುಖ್ಯರಿಗಭಯವನಿತ್ತೇ ।
ಮತ್ತೆ ಗಿರಿಜಾದಿಗಳಿಗೆ ನೀನತ್ತೆ || ||೨||

ಶುಕ್ಲೇ ಪರಶುಕ್ಲೇ । ಶುಕ್ಲಹಂಸದಿ ಮೆರೆದಿರ್ಪೆ ।
ಶುಕ್ಲರಾಜೇಶ ಹಯಮುಖ ಭಕ್ತೇ ||೩||

## ೨೨. ಭಾರತಿದೇವಿ

ರಾಗ ಕಲ್ಯಾಣಿ, ಛಾಪುತಾಳ

ಭಾರತಿ ಮರುತನ ರಾಣಿ । ಶುಭ ।
ವಾಣಿಯಾಗಿರುವಿ ಕಲ್ಯಾಣಿ ನಾರಸಿಂಹನ ಸೊಸೆಯಾದಿ ।
ಸರ್ವ । ನಾರಿಯರಿಗೂ ನೀ ಮೇಲಾದಿ ||ಪ||

ಭೀಮನು ಶೂದ್ರನೆಂದಿರಲು । ನೀನು ।
ಶೂದ್ರೆಯೆಂದೆನಿಸುತಲಿರುವಿ ।
ಕಾಮಿ ಕೀಚಕನಿಗೆ ಮೃತ್ಯುವಾದಿ । ನಿನ್ನ ।
ಪ್ರೇಮವನೇನು ಬಣ್ಣಿಸಲಿ ||೧||

ಜುಟ್ಟನು ಕೈಯೊಳು ಸೆಳೆದ ।
ದುಷ್ಟ ದೈತ್ಯನ ಪಂಥದಿ ಮಥಿಸಿ ।
ಪಟ್ಟದರಸನು ತೋರಿದುದದ್ಭುತವು ।
ಸಿಟ್ಟು ನಿನಗಾಗಿ ತೋರ್ದುದಾಶ್ಚರ್ಯ ||೨||

ರಾಜಧರ್ಮನು ಸುಮ್ಮನಿರಲು ।
ರಾಜನಾಥ ಶ್ರೀಹಯಮುಖ ದಾಸ ।
ರಾಜ ಭೀಮನು ತೋರ್ದ ಶಾಂತತೆಯ ।
ರಾಜೀವಾಕ್ಷ ನಿನ್ನೊಳು ತೋರಿದ ಕರುಣೆ ||೩||

## ೨೩. ಶೇಷದೇವರು

ರಾಗ ಕಮಾಚ್, ಆದಿತಾಳ

ಶೇಷಮೂರುತಿ ಪೋಷಿಸೆನ್ನ ।
ಹಾಸಿಗೆಯಾಗಿ ನೀ ಹರಿಯ ಪೊತ್ತಿರುವಿ ||ಪ||

ಶ್ವೇತದ್ವೀಪದ ಮಧ್ಯದಲ್ಲಿ ।
ದೇವನರಸಿಯ ಕೂಡುತ್ತಲಿರಲು ।
ಭಕ್ತಿಯಿಂದಲಿ ಕಂಗಳಿಂದ ।
ಬಿಡದೆ ನೋಡುತಲಿಪ್ಪಸಮಯ ||೧||

ಮಗಳ ಲಜ್ಜೆಯ ಕಂಡು ಪಿತನು।
ಹಾಲಿನ ತೆರೆಯಿಂದ ಕಣ್ಣನೆ ಮುಚ್ಚಿಸಿಹನು ।
ಮಗಳ ಮೇಲಿನ ಪ್ರೀತಿ ಪಿತಗೆ ।
ಯೆಣಿಸಲಾಗದು ಲೋಕದೊಳಗೆ ||೨||

ರಾಜೇಶ ಹಯಮುಖ ಹರಿಗೆ ।
ಮಂಚವೆಂದರೆ ನೀನೆ ಖರೆಯು ।
ರಾಜರಾಜರಿಗಿಂಥ ಮಂಚ ।
ದೊರಕದೆಂದೆಂದಿಗೂ ದೇವ ||೩||

# ೨೪. ಗರುಡ ದೇವರು

ರಾಗ ತೋಡಿ, ತ್ರಿಪುಟತಾಳ

ಗರುಡದೇವನೇ ಪೊರೆಯೊ ಎನ್ನನು ।
ಹರಿಯ ವಾಹನನಾಗಿ ಮೆರೆಯುವ । ಗರುಡದೇವನೇ ||ಪ||

ಮಾತೆಯ ಮಾನವನುಳಿಸಲೋಸುಗ ।
ಸುಧೆಯ ಕಲಶವ ಪೊತ್ತು ತಂದೆಯೊ ||೧||

ಹರಿಯು ನಿನ್ನೊಳು ಪ್ರೇಮದಿಂದಲಿ ।
ಧರಣಿಯೊಳವತರಿಸಲೊಲ್ಲನು ||೨||

ರಾಕ್ಷಸಾರಿ ರಾಜೇಶ ಹಯಮುಖ ।
ಪಕ್ಷಿರಾಜನೊಳಿಪ್ಪ ಭಾಗ್ಯವು ||೩||

## ೨೫. ರುದ್ರದೇವರು

ರಾಗ ಶಂಕರಾಭರಣ, ಝಂಪೆತಾಳ

ಕೈಲಾಸನಾಥ ಮಹೇಶ ಈಶ ।
ಶೈಲೇಶತನಯೇಶ ಬಾಲಾರ್ಕ ಸಮಭಾಸ ॥ಪ॥

ಶೂಲಾಕ್ಷ ಡಮರುಗಳಿಂದ ಶೋಭಿಪ ಹಸ್ತ ।
ತಾಲಾಂಕನನುಜನೊಳ್ಸಮರ ಗೈದಿರ್ಪ ॥
ಫಾಲಾಕ್ಷದಿಂದಲಿ ಕಾಮನ ದಹಿಸಿರ್ಪ ।
ಶೂಲಿಯ ಮಹಿಮೆಯನೇನು ಬಣ್ಣಿಸಲಿ ॥೧॥

ವೈಷ್ಣವಾಗ್ರಣಿಯೆಂದು ಪೆಸರುಗೊಂಡಿರುವ ।
ವಿಷ್ಣುಭಕ್ತರೊಳಗತಿ ಪ್ರೇಮವಿರುವ ॥
ಕೃಷ್ಣದ್ವೈಪಾಯನರ ಸುತರಾಗಿ ಶೋಭಿಪ ।
ಸನಕಾದಿಗಳ ಶಿಷ್ಯ ದುರ್ವಾಸರೆನಿಪ ॥೨॥

ನಂಜುಂಡನೆನಿಸಿರ್ಪ ಪ್ರಖ್ಯಾತ ಮಹಾದೇವ ।
ಕಂಜಜಾತನ ಸುತನೆನಿಸಿರ್ದ ದೇವ ।
ರಾಜೇಶ ಹಯಮುಖ ಭಕ್ತಪುಂಗವ ನೀನು ।
ಅಂಜಲಿ ಬಂಧದಿಂ ನಮಿಪೆ ನಿನ್ನಡಿಗೆ ॥೩॥

## ೨೬. ಪಾರ್ವತಿದೇವಿ

ರಾಗ ಅಠಾಣ, ಝಂಪೆತಾಳ

ದೇವಿ ನೀ ಗಿರಿಜಾತೆಯು । ನಿನ್ನಯ ಕಾಂತ ರಜತಾಖ್ಯ ಗಿರಿನಾಥನು॥
ನೀನು ಭವಾನಿಯು ನಿನ್ನ ಕಾಂತನು ಭವದೇವನಾಗಿರುವ ॥ಪ॥

ನಿನ್ನ ಯೌವನಭಂಗದ ಭೀತಿಯ ಕಂಡು । ವಿಘ್ನೇಶನನು ಪುಟ್ಟಿಸಿ ।
ಷಣ್ಮಾತೃಗಳನೊಬ್ಬ ತನುಜಗೆ ಕಲ್ಪಿಸಿ ।
ಕೃತಕೃತ್ಯನಾದ ನಿನ್ನರಸ ಕಾಣಮ್ಮ ॥೧॥

ನಿನ್ನ ಕಾಂತನು ಪಾರ್ಥನಿಗೆ ಬಾಣವನೀಯಲು ।
ನೀನು ಅಂಜಲಿಕಾಸ್ತ್ರವನು ಪ್ರೇಮದಿ ॥
ನಿನ್ನ ಕಾಂತನ ಚಿತ್ತವರಿತು ಕೊಡಲು ನಿನ್ನೊಳ್ ।
ಪಾರ್ಥಸೂತನ ದಯವೆಷ್ಟೆಂಬೆ ॥೨॥

ರಾಜೇಶ ಹಯಮುಖನ ದಯದಿಂದ ನಿನ್ನ ಪತಿ ।
ವಿಷವ ಜೀರ್ಣಿಸಿಕೊಂಡನು ॥
ರಜತಾದ್ರಿಯೊಳಗಿರುವ ಶಿತಿಕಂಠ ಶಂಕರನ ।
ಮಹಿಮೆಯದ್ಭುತವಲ್ಲವೇ ಪೇಳು ಗಿರಿಜೆ ॥೩॥

## ೨೭. ಷಣ್ಮುಖ

ರಾಗ ಮುಖಾರಿ, ತ್ರಿಪುಟತಾಳ

ಧೀರ ಕುಮಾರ ಮಾರವತಾರ । ಪಾಹಿ ತ್ರ್ಯಂಬಕನ ಕುಮಾರ ॥ಪ॥
ತಾರಕಾಸುರಸಂಹಾರ । ದೇವ । ನಿನ್ನಲಿ ದೇವಸೈನ್ಯದ ಭಾರ ।
ಗಿರಿಜಾದೇವಿಯ ಮೋಹದ ಕುವರ । ಪೊರೆಯೊ ಎನ್ನನು
ಕರುಣಾಸಾಗರ ॥೧॥

ಅಮರಸೇನೆಗೆ ನೀನಗ್ರೇಸರ । ಭೂಸುರ ಹತ್ಯಾ ಪಾಪಸಂಹಾರ ।
ಸಮರದೊಳಗೆ ನೀನು ಶೂರ ।
ನಮಿಸುವರಿಗಿಷ್ಟಫಲವೀವ ವೀರ ॥೨॥

ವಿಪ್ರ ಜನರಿಗತಿಪ್ರಿಯ । ವಲ್ಲಿಸೇನೆಗೆ ಪ್ರಾಣಪ್ರಿಯ ।
ವ್ಯಾಪ್ತ ರಾಜೇಶ ಹಯಮುಖನ । ಚಕ್ರಾಭಿಮಾನಿ ಮೂರುತಿ –
ಯಾಗುತಿರುವಿ ॥೩॥

## ೨೮. ಗಣಪತಿ

ರಾಗ ಕಾನಡಾ, ಛಾಪುತಾಳ

ಬಾರೊ ಮಹೇಶತನಯ ಗಣೇಶ ।
ವರವಿಷ್ಣುಪದಕಭಿಮಾನಿ ವಿಘ್ನೇಶ ||ಪ||

ನಿನ್ನ ಪೂಜಿಸಿ ಧರ್ಮರಾಜನು ಗೆದ್ದ ।
ನಿನ್ನ ಪೂಜಿಸದೆ ದುರ್ಯೋಧನ ಬಿದ್ದ ॥
ನಿನ್ನ ಪೂಜಿಸಿ ರಾಮ ಸತಿಯನೆ ಪಡೆದ ।
ನಿನ್ನನರ್ಚಿಸದ ದಶಕಂಠನು ಕೆಟ್ಟ ||೧||

ಸುರಮುಖ್ಯರೆಲ್ಲರು ನಿನ್ನ ಪೂಜಿಪರು ।
ಪರಮಾತ್ಮನಿಗೆ ನೀನು ಮರಿಮ[ಗ]ನಿರುವಿ ।
ಸುರಮುನಿ ದಿತಿಜಾದಿಗಳಿಗತಿಪ್ರಿಯನೆ ।
ಸರುವರಿಂದಲು ಮೊದಲು ಪೂಜೆಗೊಂಬವನೆ ||೨||

ರಾಜೀವಾಕ್ಷಗೆ ಸತ್ಯಾದೇವಿಯೊಳ್ಜನಿಸಿ ।
ಮೂಜಗದಲಿ ನೀನು ಪೂಜ್ಯನೆಂದೆನಿಸಿ ॥
ರಾಜೇಶ ಹಯಮುಖ ಚರಣಾಬ್ಜಭೃಂಗ ।
ಕಂಜಜತನಯನ ಹೆಮ್ಮಗ ಕಂಡ್ಯಾ ||೩||

## ೨೯. ಗಂಗಾನದಿ

ರಾಗ ಧನ್ಯಾಸಿ, ಆದಿತಾಳ

ಗಂಗೆ ಮಂಗಲ ತರಂಗೆ ಪಾಹಿ ।
ಪಾಪಭಂಗೆ ಹರಿಪಾದಸಂಗೆ ॥ ||ಪ||

ಗಂಗೆ ಹರಿಪಾದದಿಂದ ಉದ್ಭವಿಸಿದೆ ।
ಪರಮೇಷ್ಠಿಯ ಪಾತ್ರೆಯೊಳಗೆ ನಿಂತೆ ।
ಹರಶಿರದೊಳು ನಿತ್ಯ ನೆಲಸಿದೆ ।
ಮತ್ತೆ ಸ್ಮರಿಪರ ಚಿತ್ತದೊಳ್ ವಾಸಿಸಿದೆ ||೧||

ಸಗರಪುತ್ರರ ಪವಿತ್ರಿಸಿದೆ । ನೀನು ।
ಗಗನದೊಳ್ ಹರಿಯುವ ನದಿಯಾದೆ ।
ನಗವರಕೈಲಾಸಕ್ಕಿಳಿದೆ । ಈ...
ಜಗವರಿಯೆ ಜಹ್ನುತನಯೆಯಾದೆ ||೨||

ರಾಜೇಶ ಹಯಮುಖತನಯೆ ।
ರಾಜಧರ್ಮನು ನಿನ್ನ ತಟದಲ್ಲಿ ಮೂಜಗವು
ತಾ ಪೊಗಳುವಂದದಿ । ವಾಜಿಮೇಧವ ಗೈದನಾದರದಿ ||೩||

## ೩೦. ಯತಿ - ನಮನ

ರಾಗ ಹಿಂದುಸ್ಥಾನಿ ಕಾಪಿ, ಆದಿತಾಳ

ಯಾತರ ಭಯವಿದೆ ಹರಿಯ ಕಿಂಕರಗೆ ।
ಪಾರ್ಥಸೂತನ ದಯವಿದ್ದರೆ ಸಾಲದೇ ॥ಪ॥

ನಿತ್ಯಕರ್ಮವ ಮಾಡಿ ಹರಿಯ ಪೂಜಿಪಗೆ ।
ಮತ್ತೆ ಇಂದ್ರಿಯಗಳ ಜಯಿಸಿಕೊಂಬವಗೆ॥ ॥೧॥

ಹರಿದಿನ ವ್ರತವನ್ನು ಬಿಡದೆ ಮಾಡುವಗೆ ।
ಸರ್ವ ಜೀವೋತ್ತಮ ಪ್ರಾಣನೆಂಬವಗೆ ॥ ॥೨॥

ಜಗದೊಳು ಶ್ರೀಮಧ್ವರಾಯರ ಮತವೇ ।
ನಿಗಮಾರ್ಥವೆಂದು ಡಂಗುರವ ಸಾರುವಗೆ॥ ॥೩॥

ತೇಜಿಯನೇರ್ದು ದುರ್ಜನರ ಸಂಹರಿಸುವ ।
ರಾಜೇಶ ಹಯಮುಖನ ಒಲಿಸಿಕೊಂಬವಗೆ ॥೪॥

## ೩೧. ಶ್ರೀ ಜಯತೀರ್ಥರು

ರಾಗ ನಾದನಾಮಕ್ರಿಯೆ, ಆದಿತಾಳ

ಜಯ ಜಯ ಜಯ ಮಧ್ವಶಾಸ್ತ್ರವ್ಯಾಖ್ಯಾನಾತಿಗೇಯ ||ಪ||

ಮಂಗಲವೇಡೆಯೊಳುದುಭವಿಸುತ ಜಗ -
ನ್ಮಂಗಲಕರವಾದ ಟೀಕೆಯ ರಚಿಸಿ ||
ಮಂಗಲಮೂರುತಿ ರಾಮನ ಭಜಿಸುತಾ -
ನಂಗನ ಜಯಿಸಿದ ಮುನಿಕುಲತಿಲಕ ||೧||

ವಿದ್ಯಾರಣ್ಯನೆಂಬ ಖಾಂಡವವನವನೆ |
ಯಾದವೇಶನ ಸಖನಂತೆ ನೀ ದಹಿಸಿ ||
ಮಧ್ವಶಾಸ್ತ್ರವೆಂಬ ರತ್ನವ ಜನರಿಗೆ |
ಸುಧೆಯಂತೆ ಕುಡಿಸಿದ ಯತಿವಂಶರತ್ನ ||೨||

ಮಾಧ್ವಗ್ರಂಥವ ನೀನು ಬಂಧುವೆಂದೆಣಿಸುತ |
ರಾಜೇಶ ಹಯಮುಖ ಶ್ರೀರಾಮಚಂದ್ರ||
ಪಾದಾಂಬುರುಹವನ್ನೆ ಬಿಡದೆ ಸೇವಿಸುತಲಿ |
ವಾದೀಭಗಳಿಗೆ ಮೃಗೇಂದ್ರನಾಗಿರುವಿ ||೩||

## ೩೨. ಶ್ರೀ ರಾಘವೇಂದ್ರರು

ರಾಗ ಹಿಂದುಸ್ತಾನಿ ಕಾಪಿ, ಝಂಪೆತಾಳ

ವರ ಮಂತ್ರಾಲಯದೊಳು ಘನವಾಗಿ ನೆಲಸಿರ್ಪ ।
ಪರಮ ಸದ್ಗುರುವರ್ಯ ಶ್ರೀ ರಾಘವೇಂದ್ರ ||ಪ||

ಭುವನಾದ್ರಿಯೊಳಗುದುಭವಿಸುತ್ತ ರವಿಯಂತೆ ।
ತವಕದಿಂ ದಿನದಿನವು ತೇಜವನು ಬೆಳಗುವೆ || ||೧||

ನರನಂತೆ ಮೆರೆಯುವ ಜಯಮುನಿಕೃತಶಾಸ್ತ್ರ।
ಪರಿಮಳವನು ನೀನು ಪಸರಿಸಿದೆಯಲ್ಲವೆ ||೨||

ಮಧ್ವಮತವೆಂಬ ದುಗ್ಧಸಾಗರದೊಳು ।
ಉದ್ಭವಿಸಿದ ಪೂರ್ಣಹಿಮಕರ ತೇಜ ||೩||

ಅಸುರನಂದನನಾಗಿ ನರಹರಿಯನೆ ಕಂಡ ।
ವ್ಯಾಸರಿವರು ಸಿರಿಗುರು ರಾಘವೇಂದ್ರ || ||೪||

ರಾಜೇಶ ಹಯಮುಖ ಭಜಕರೊಳಗೆ ನೀನು ।
ರಾಜಿಪ ಸುರತರುವಂತಿರ್ಪೆ ಗುರುವೆ ||೫||

# ೩೩. ಶ್ರೀ ವಿಷ್ಣುತೀರ್ಥರು

ರಾಗ ಆನಂದಭೈರವಿ, ಛಾಪುತಾಳ

ವಿಷ್ಣುತೀರ್ಥ ಪಾಲಿಸೀ ನಿರಂತರ ।
ಪೂರ್ಣಪ್ರಜ್ಞರ ಸೋದರ ।
ಮಧ್ಯಗೇಹರ ಸುತನೆನಿಸಿರ್ದ ಗುರುವರ ||ಪ||

ಮಧ್ವಶಾಸ್ತ್ರವು ಜೀರ್ಣವಾಗುವ ಸಮಯದಿ ।
ಬದ್ಧಾದರದಿ ಬಂದುದ್ಧರಿಸುವ ಗುರುವರ ||೧||

ಅಣ್ಣನೊಳ್ನಿಮಗಿಪ್ಪ ಶ್ರದ್ಧೆಯ ಕಂಡರೆ ।
ಜಾನಕೀಪತಿಯೊಳು ಲಕ್ಷುಮಣನಂತೆ ||೨||

ವಾಲ್ಮೀಕಿಗಳ ಶಿಷ್ಯ ಕುಶಲವರಂತೆಯೇ ।
ಚೆಲ್ವ ವ್ಯಾಸರು ಅನಿರುದ್ಧರು ನಿಮಗೆ ||೩||

ಪಾಜಕ ಕ್ಷೇತ್ರದೊಳ್ಸನ್ಯಾಸಾಶ್ರಮಿಯಾಗಿ ||
ರಾಜೇಶ ಹಯಮುಖ ಕೃಷ್ಣನನರ್ಚಿಸಿದ ||೪||

## ೩೪. ಶ್ರೀ ವಾಗೀಶತೀರ್ಥರು

ರಾಗ ಕಾಂಭೋಜ, ಝುಂಪೆತಾಳ

ಭಳಿರೆ ವಾಗೀಶತೀರ್ಥಾಖ್ಯ ಮುನಿವರ್ಯ ।
ಇಳೆಯೊಳು ನಿನಗೆಣೆ ಕಾಣೆ ನಾ ಯತಿವರ್ಯ ||ಪ||

ಜಗದೊಳು ದುರ್ವಾದಿಮತವ ಖಂಡಿಸಿದ ।
ಜಗದೀಶ ಹರಿಯೆ ಸರ್ವೋತ್ತಮನೆಂದು ।
ನಿಗಮಾರ್ಥವನು ಜಗದಿ ಸಾರಿದಾ ಕುಜನೇಭ ।
ಮೃಗರಾಜ ವಾದಿರಾಜರಿಗೆ ಗುರುವೆನಿಸಿದೆ ||೧||

ಭಾವಿಸಮೀರ ಶ್ರೀವಾದಿರಾಜರ ಜನ್ಮೋತ್ಸವ
ಕಾಲವರಿತಾಗ ಸುಮಪುರಕೆ ನೀನು ।
ತವಕದಿಂದಲಿ ಪೋಗಿ ಬಾಲಕನ ರಕ್ಷಿಸಿ ।
ಅವನನೆ ಯತಿರಾಜ ಪಟ್ಟದೊಳಿರಿಸಿದಿರಿ ||೨||

ಗುರು ಮಧ್ವರಂತೆ ನೀ ಸರ್ವಶಾಸ್ತ್ರವ ಮಾಡಿ।
ಧರಣಿಯೊಳು ರಾಜೇಶ ಹಯಮುಖನ ಚರಣ ।
ಸ್ಮರಿಸಿ ನೂರಿಪ್ಪತ್ತು ವತ್ಸರದ ಕಾಲದಲಿ ।
ಇರುವಿರೆನುತಲಿ ಅವರ ಹರಿಸಿದಿರಿ ಧೊರೆಯೆ ||೩||

## ೩೫. ಶ್ರೀ ವಾದಿರಾಜ ಯತಿಗಳು

ರಾಗ ಹಂಸಾನಂದಿ, ಛಾಪುತಾಳ

ಜನ್ಮ ಸಫಲ ಕಾಣಿರೋ ।
ನಮ್ಮ ಗುರು ವಾದಿರಾಜರಾಯರ ಕಂಡು ॥
ಜನ್ಮ ಸಫಲ ಕಾಣಿರೋ ॥ಪ॥

ಯುಕ್ತಿಮಲ್ಲಿಕೆಯೆಂಬ ಗ್ರಂಥ ಮಾಡಿಹರು ।
ಮತ್ತೆ ಮುತ್ತಿನ ಸಿಂಹಾಸನವೇರಿಹರು ॥
ಮತ್ತೆ ದುರ್ವಾದೀಭಗಳಿಗೆ ಮೃಗೇಂದ್ರರು ।
ಸೂತ್ರನಾಮದಿ ಮುಂದೆ ಮೆರೆವರು ॥೧॥

ಭಾಸುರ ಕಾಯದಿ ನೂರ ಇಪ್ಪತ್ತು ।
ವರ್ಷಗಳೊಳಗಿದ್ದು ಮೆರೆದವರು ॥೨॥

ಮೂಜಗದೊಳಗಿಂಥ ಗುರುಗಳೆಲ್ಲಿಹರು ಕಂಜಸುತನ
ಪದವೇರುವರು ॥
ರಾಜೇಶ ಹಯಮುಖ ಕಿಂಕರಾಗ್ರಣಿಗಳು ।
ರಾಜಿಪ ಶ್ರೀ ಸೋದಾಪುರದೊಳಗಿಹರು ॥೩॥

## ೩೬. ಶ್ರೀ ವಾದಿರಾಜ ಯತಿಗಳು

ರಾಗ ಆನಂದಭೈರವಿ, ಛಾಪುತಾಳ

ಭಾವಿಸಮೀರ ಗುರು ಶ್ರೀವಾದಿರಾಜ ।
ನಿಮ್ಮ । ಸೇವಿಪ ಜನರಿಗಭೀಷ್ಟವನೀವ ||ಪ||

ಹನುಮ ಭೀಮ ಮಧ್ವರೊಡಗೂಡಿ ವೃಂದಾ
ವನದೊಳು ಮೆರಸುವ ಮುಂದಿನ ಸೊಬಗ ||
ಪಂಥದಿ ವೀರಶೈವರ ಗುರುವನೆ ಗೆದ್ದು ।
ಹತ್ತಿದೆ ಮುತ್ತಿನ ದಿವ್ಯಪೀಠವನು ||೧||

ಕುಂಡಿನೇಶನ ತನುಜಾತೆಯ ಪತ್ರವ ।
ಪುಂಡರೀಕಾಕ್ಷನಿಗರ್ಪಿಸಿದ್ಯಲ್ಲೋ ||
ಮದುವೆಯ ಸಮಯದಿ ಶಪಥದಿಂದಲಿ ಬಂದು ।
ವಧುವಿನ ಭಾಗ್ಯವನುಳಿಸಿದೆಯಲ್ಲೋ ||೨||

ಅರಿತುಂಡು ವಿಷವನೀನರಗಿಸಿಕೊಂಡ್ಯಲ್ಲೋ ।
ನರಪತಿತನಯನ ಬದುಕಿಸಿದ್ಯಲ್ಲೋ ||
ಭಜಿಸುತ ರಾಜೇಶ ಹಯಮುಖನಂಘ್ರಿಯ ।
ತ್ರಿಜಗದೊಳಧಿಕ ಸೋದಾಪುರದೊಳು ನಿಂದ್ಯೋ ||೩||

## ೩೭. ಶ್ರೀ ವಾದಿರಾಜ ಯತಿಗಳು

ರಾಗ ಬೇಹಾಗ್, ಆದಿತಾಳ

ರಾಜರ ಭಾಗ್ಯವಿದು । ವಾದಿರಾಜರ ಭಾಗ್ಯವಿದು ||ಪ||
ಸೋದೆ ರಾಜರ ಭಾಗ್ಯವಿದು ||

ರಾಜರ ಭಾಗ್ಯವನೆಂತು ವರ್ಣಿಪೆನು ನಾ ।
ವಾಜಿವದನನ ಸದಾ ಪೂಜಿಪ ಭಾಗ್ಯವು ||೧||

ಐದು ಪರ್ಯಾಯದಿ ಕೃಷ್ಣನ ಪೂಜೆಯ - ।
ನಾದರದಲಿ ರಚಿಸಿರ್ದ ವಿಭವವಿದು ||೨||

ಸುರರಭಿಮಾನವ ತಡೆದು ನಿಲ್ಲಿಸಿದ ।
ಮರುತನ ಪದವ ಮುಂದೇರುವ ಭಾಗ್ಯವು ||೩||

ಬದರಿಕಾಶ್ರಮದಿಂದ ನದಿಯ ಪೆತ್ತನ ತಂದು !
ಸದನದೊಳಿರಿಸಿದುದತಿ ವಿಭವಾ ||೪||

ಸೋದೆಯ ಪುರದಿ ರಾಜೇಶ ಹಯಾಸ್ಯನ ।
ಪಾದವ ಭಜಿಸುತ ನಿಂದಿಹ ಭಾಗ್ಯವು ||೫||

## ೩೮. ಶ್ರೀ ವಾದಿರಾಜ ಯತಿಗಳು

ರಾಗ ತೋಡಿ, ಆದಿತಾಳ

ವಾದಿರಾಜರ ಪದವ ಸ್ಮರಿಸುವೆ ಅ -
ಗಾಧ ಮಹಿಮರ ಸದಯ ಹೃದಯರ ||ಪ||

ಮೋದತೀರ್ಥರಾಗಮದ ಸಾರವ ।
ಸಾಧು ಜನರಿಗೆ ಬೋಧಿಸಿರ್ಪರ ||
ವಾದದಿಂದಲಿ ವೀರಶೈವರ ।
ಗೆದ್ದು ಮುತ್ತಿನ ಪೀಠವೇರ್ದರ ||೧||

ಪಾದದಿಂದಲೆ ಸಕಲ ತೀರ್ಥವ ।
ಮೋದದಿಂದ ಚರಿಸಿ ತೀರ್ಥಪ್ರ-
ಬಂಧ ಗ್ರಂಥವ ರಚಿಸಿ ಮಾನ್ಯರಾ -
ಗಿರ್ದ ಗುರುಗಳನೆಂತು ಬಣ್ಣಿಪೆ ||೨||

ರಾಜಸಭೆಯೊಳು ರಾಜಭೀಷ್ಮಕ ।
ತನುಜೆಯರಸನ ಸ್ತುತಿಪ ಕಾವ್ಯವ ।
ಈ ಜಗತ್ತಿನೊಳ್ ಶ್ರೇಷ್ಠ ಕಾವ್ಯವೆಂ -
ದಿದನೆ ಗಜದೊಳು ಮೆರೆಸಿದರಸನು ||೩||

ಒಂದುನೂರ ಇಪ್ಪತ್ತು ವರ್ಷದೊಳ್ ।
ಸಿಂಧುಶಯನನ ಸೇವಿಸುತ್ತಲಿ ।
ಇಂದ್ರದತ್ತ ವಿಮಾನದಿಂದಲಿ ।
ಸತ್ಯಲೋಕವನ್ನೈದಿದ ಗುರುವರ ||೪||

ಯುಕ್ತಿಮಲ್ಲಿಕಾ ಗ್ರಂಥದಿಂದ ।
ರಾಜೇಶ ಹಯಮುಖಾನಂತಗುಣಗಳ ||
ಪೊಗಳುತಿರ್ಪರ ರಾಗಶೂನ್ಯರ ।
ಋಜುಗಣೇಶರ ಜ್ಞಾನಪೂರ್ಣರ ||೫||

## ೩೯. ಭೂತರಾಜರು

ರಾಗ ಶಂಕರಾಭರಣ, ಝಂಪೆತಾಳ

ಭೂತರಾಜ ಕರುಣಿಸೊ ಭೂತರಾಜ ।
ಮುಂದೆ ಬೆಳ್ಳಿಯ ಗಿರಿನಾಥನೆಂದೆನಿಸುವ । ಭೂತರಾಜ ॥ಪ॥

ವಾದದಿಂದಲಿ ಸೋತು ವಾದಿರಾಜರ ಸೇರ್ದೆ ।
ಭೂತಾದಿಗಳ ಬೇಗದಿಂದಲೋಡಿಸುವಿ ॥೧॥

ವಾದಿರಾಜರ ಬಲಭಾಗದಿ ನಿಂತಿರ್ದಿ ।
ಬಂದ ಜನರಿಗಿಷ್ಟ ಕೊಟ್ಟು ಪೋಷಿಸುವಿ ॥೨॥

ರಾಜೇಶ ಹಯಮುಖ -
ನೊಲಸಿಕೊಂಡಿಹ ಋಜು ।
ಗಣನಾಥ ಶ್ರೀ ವಾದಿರಾಜ ಕಿಂಕರವರ್ಯ ॥೩॥

## ೪೦. ಭೂತರಾಜರು

ರಾಗ ಆರಭಿ, ಝಂಪೆತಾಳ

ಭೂತನಾಥ ಪಾಲಿಸೆನ್ನ । ನಾರಾಯಣ ॥
ಭೂತನಾಥನೆ । ಪಾಲಿಸೆನ್ನ ॥ಪ॥

ಕರ್ಣವಿಕರ್ಣಾದಿ ಗಣಗಳಿಂದಲಿ ಕೂಡಿ ।
ಸ್ವರ್ಣದಿ ಭಾಸುರಾಂಗ ಶ್ರೀರಾಜರ ॥
ಸ್ವರ್ಣದ ಪಾಲಕಿಯನ್ನು ಮುಂಭಾಗದಿ ।
ಭಕುತಿಯಿಂದಲಿ ಪೊತ್ತ ಶ್ರೀಭೂತರಾಜ ॥೧॥

ಬದರಿಕಾಶ್ರಮದಿಂದ ನದಿಯ ತಾತನ ದಿವ್ಯ ।
ಸದನವ ಶ್ರೀಸೋದಾಕ್ಷೇತ್ರಕ್ಕೆ ತರಲು ॥
ಬೆದರದೆ ವಿಘ್ನವ ತಂದ ದೈತ್ಯನ ರಥ ।
ಚಕ್ರದಿಂದಲಿ ಕೊಂದು ರಥವ ಬೇಗದಿ ತಂದೆ ॥೨॥

ಧನಪನ ಕೋಶದೊಳಿಪ್ಪ ಮೌಳಿಯ ಬೇಗ - ।
ದಿಂದಲಿ ನೀ ತಂದು ವಾದಿರಾಜರಿಗಿತ್ತೆ ॥
ಅನುಮಾನವಿಲ್ಲದೆ ತಂದು ಶ್ರೀ ರಾಜೇಶ ।
ಹಯಮುನನುಚರಾಗ್ರಣಿಯಾಗಿ ಮೆರೆದೆ ॥೩॥

# ೪೧. ಶ್ರೀ ವೇದವೇದ್ಯರು

ರಾಗ ತೋಡಿ, ಛಾಪುತಾಳ

ವೇದವೇದ್ಯರ ವಂದಿಸುವೆನು ।
ವಾದಿರಾಜರ ಪ್ರಿಯಶಿಷ್ಯರ ॥
ವೇದವೇದ್ಯರ ವಂದಿಸುವೆನು ॥ಪ॥

ವಾದಿರಾಜರ ಪಾರ್ಶ್ವದಲ್ಲಿಹ ।
ವಾದಿಗಳ ದುರ್ವಾದ ಕೆಡಿಸಿದ ॥
ಮಧ್ವಶಾಸ್ತ್ರವನುದ್ಧರಿಸಿದ ।
ವೇದನಿಧಿಗಳ ತಾತರಾಗಿಹ ॥೧॥

ರೂಪ್ಯಪೀಠದಿ ಕೃಷ್ಣಮಂದಿರ ।
ರೂಪಳಿದುದನುದ್ಧಾರ ಮಾಡಿದ ।
ಪಾಪರಹಿತರ ಕೋಪಶೂನ್ಯ ಸೋ - ।
ದಾಪುರದೊಳಗೆ ಇರ್ಪ ಯತಿಗಳ ॥೨॥

ಯಾದವೇಶ ರಾಜೇಶ ಹಯಮುಖ ।
ಪಾದಕಮಲವ ಬಿಡದೆ ಸ್ಮರಿಸುವ ।
ಸಾಧುಜನರಿಗಾಧಾರರಾಗಿಹ ।
ವಾದಿರಾಜರ ಪದದೊಳಿರ್ಪರ ॥೩॥

## ೪೨. ಶ್ರೀ ವಿಶ್ವಪ್ರಿಯರು

ರಾಗ ಭೂಪಾಳಿ, ಏಕತಾಳ

ವೃಂದಾವನಾಚಾರ್ಯರು ಭಾವಿಸಮೀರರ ವೃಂದಾವನದಿ ಶಾಸ್ತ್ರದ
ವೃಂದವನೆ ಪಠಿಸುತ
ಚಂದದಿ ಲೋಕದೊಳಗತ್ಯಂತ ಪೂಜ್ಯರ ನಮಿಸುವೆನು
ವಿಶ್ವಪ್ರಿಯರ ||ಪ||

ವಿಷ್ಣುತೀರ್ಥರ ಪೀಠದಿ ವಾಸಿಸಿ ವಾಸಿಷ್ಠ ಕೃಷ್ಣನ ದಯದಿ
ದ್ವಾದಶಾಬ್ದಗಳಲ್ಯುಪೋಷಣ |
ಕೃಷ್ಣನೊಳಗರ್ಪಿಸಲು ಪ್ರೇಮದಿ ಕೃಷ್ಣಭೂಪನು ರತ್ನಮಂಟಪನ್ನ
ನಿಮಗರ್ಪಿಸಿದನು ||೧||

ಕೇರಳ ನೃಪವರ್ಯನು ನಿಮ್ಮಯ ಶಿಷ್ಯವರ್ಯನಾಗಿರುತಿಹನು |
ಸಾರಮಧ್ವಾಗಮವ ನಿಮ್ಮೊಳಗೋದಿ ಪಂಡಿತವರ್ಯನೆನಿಸುತ
ವೀರ ವಿಷ್ಣುಭಕ್ತನಾದನು ||೨||

ರಾಜೇಶ ಹಯಮುಖನ ಕಿಂಕರರೊಳು ನಿಮಗೆಣೆ ನಾ ಕಾಣೆನು |
ರಾಜರಾಜರು ಪೊಂದದಿರುತಿಹ ನಾಕಿನಾಥನ ಪದವನೇರುವ
ಗುರುವರ್ಯರನೆ ನಮಿಪೆ ||೩||

## ೪೩. ಶ್ರೀ ವಿಶ್ವಾಧೀಶರು

ರಾಗ ಸಾರಂಗ, ಝಂಪೆತಾಳ

ನಮಿಪೆ ಗುರುವರ್ಯ ವಿಶ್ವಪ್ರಿಯ ಶಿಷ್ಯರ ||ಪ||

ಆಂಗ್ಲ ದೇಶದ ರಾಣಿಯು ನಿಮ್ಮಯ |
ಶಾಸ್ತ್ರಸಂಘದ ಮಹಿಮೆಯನು |
ಆಂಗ್ಲೇಯ ಜನರಿಂದ ತಿಳಿದು ತಾ ಬಹುಮಾನ- |
ವಾಂಗ್ಲೇಯ ಭಾಷೆಯೊಳಿತ್ತಳಾದರದಿ ||೧||

ನ್ಯಾಯಸುಧೆಯ ಪಾಠವ ಯತಿವರ್ಯ
ವಿಬುಧಪ್ರಿಯರೆ ಮುಖ್ಯರು|
ಆಯಾಸವಿಲ್ಲದೆ ಪಠಿಸುತ್ತ ನಿಮ್ಮೊಳು
ಪಂಡಿತಾಗ್ರಣಿಯಾದರು ||೨||

ಅರುವತ್ತನೆಯ ವರ್ಷದಿ ಪ್ಲವಾಬ್ದದಿ |
ರಾಜೇಶ ಹಯಮುಖನ ಚರಣವ ಸ್ಮರಿಸುತ್ತ ||
ಸ್ಮರತಾತನನ್ನೈದಿದ ಕರುಣಾಸಮುದ್ರರ |
ಚರಣಕ್ಕೆ ನಮಿಸುವೆನು ||೩||

## ೪೪. ಉಡುಪಿ ಕ್ಷೇತ್ರ

ರಾಗ ಪೂರ್ವಿಕಲ್ಯಾಣ, ಆದಿತಾಳ

ರಜತಪೀಠವೆ ಭೂವೈಕುಂಠ ।
ಇಲ್ಲಿ ಮಧ್ವಪುಷ್ಕರಿಣಿಯೆ ವಿರಜೆ ॥
ಅಲ್ಲಿ ರಾಜಿಪರಷ್ಟಮಹಿಷಿಯರು ।
ಇಲ್ಲಿ ರಾಜಿಪರಷ್ಟಯತಿಗಳು ॥ಪ॥

ಅಲ್ಲಿ ಎಲ್ಲರೊಳಿರುವದು ಭಕ್ತಿ ।
ಇಲ್ಲಿ ಎಲ್ಲಿ ನೋಡಲು ವಿರಕ್ತಿ ॥
ಅಲ್ಲಿಪ್ಪ ಜನರಿಗೆ ಮುಕ್ತಿ ಇಲ್ಲಿ ।
ಎಲ್ಲಿ ನೋಡಿದರಲ್ಲಿ ಭುಕ್ತಿ ॥೧॥

ಅಲ್ಲಿ ಮತ್ತಿಲ್ಲ ಜನರಿಗೆ ಪುಣ್ಯ ।
ಇಲ್ಲಿ ಲಭಿಸುವುದೆಲ್ಲವೂ ಪುಣ್ಯ ॥
ಅಲ್ಲಿ ಹೋದವರಿಗಿಲ್ಲಾಗಮನವು ।
ಇಲ್ಲಿ ಬಂದವರಿಗಿಲ್ಲ ಜನನ ॥೨॥

ಪೂಜೆಯ ವೈಕುಂಠದೊಳಗೆ ।
ಸರ್ವ ಜನರು ಮಾಡಬೇಕೆಂದಿಹರು ॥
ರಾಜೇಶ ಹಯಮುಖ ಕೃಷ್ಣ ।
ಮಧ್ವಾಚಾರ್ಯರೊಬ್ಬರ ಪೂಜೆಗೊಂಬ ॥೩॥

## ೪೫. ಸೋದಾಕ್ಷೇತ್ರ

ರಾಗ ಮೋಹನ, ಆದಿತಾಳ

ಸೋದಾಕ್ಷೇತ್ರವೆ ದಿವ್ಯ ಕ್ಷೇತ್ರ। ಬಂದ ಜನರಿಗಿಷ್ಟವನೀವ ಕ್ಷೇತ್ರ ॥
ವಾದಿರಾಜರು ವಾದದಿಂದ ವಾದಿ ವೀರಶೈವರ ಗೆದ್ದ ಕ್ಷೇತ್ರ ॥ಪ॥

ಒಂದು ಭಾಗದಿ ರೂಪ್ಯಪೀಠ ಮತ್ತೊಂದು ಭಾಗದಿ ಸೋದಾ ಕ್ಷೇತ್ರ ॥
ಕುಂದು ಎಳ್ಳಷ್ಟಿಲ್ಲದೆ ತೋರ್ಪುದೆಂದು ಹರಿಭಕ್ತರಾದರಿಸುವರು
॥೧॥

ಒಂದೇ ಸ್ಥಾನದಿ ಶ್ವೇತದ್ವೀಪ ಮತ್ತೆ ವೈಕುಂಠಾನಂತಾಸನಗಳು ॥
ಒಂದಾಗಿ ಶೋಭಿಸುತಿರುವ ಚೆಂದವೇನೆಂದು ಪೇಳಲಿ ಮನವೆ ॥೨॥

ರಾಜೇಶ ಹಯಮುಖ ಚರಣ ಕಂಜ ಮಧುಪನಂತಿರುವ ಶ್ರೀಭಾವಿ ॥
ಕಂಜಜಾತನ ಪದಕರುಹ ವಾದಿರಾಜರಾಯರ ದಿವ್ಯಕ್ಷೇತ್ರ ॥೩॥

# ಅನುಬಂಧ (ಅ)

(೧)

## ತುಳುವ ಗೀತೆ

ರಾಗ ಬೇಹಾಗ್, ತಿಶ್ರಜಾತಿ ಏಕತಾಳ

ಮದಿಮೆ ಒಂಜಿ ದ್ರುಪದರಾಜ ಮಂದಿರೊಂಟು ।
ಬುಂದೆಲಾಡ್ ಚುರುಟಿ ಫೇಣಿ ರಾಶಿ ರಾಶಿ ||ಪ||

ಅಂದಡೆಂಕ್ಳು ಬೇಗ ಪೋಂಡ ಬೋಡನಾತ್ ।
ತಿಂದ್ ತಿಂದ್ ಪೋವಳ್ಯಾತ ಬೇಗ ಬಲ್ಲೆ ||೧||

ಪೋನಗಾಕ್ಳೆ ಪಯಿಕ್‌ಡೊರಿ ಜಿಂಜ ಬಿರ್‌ಸೆ ।
ಸುಂದರಾಂಗ ಭೀಮ ದೇಹ ಸೂತು ಪಣುವೆ ||೨||

ಅಂದಡೆಂಕ್ಳೆ ಪಯಿಕ್‌ಡ್ ಇಂಬ್ಯೆ ದ್ರೌಪದೀನಿ ।
ಮಂದ ಮಂದ ಪೋತು ಪೋತು ತುಂಬುವೆ ಸತ್ಯ ||೩||

ಇಂಚ ಮಂತ ಭೂಸುರೇಕ್ಳೆ ಸಂಘ ಸಂಘ।
ಚಂಚಲಾಕ್ಷಿ ಕಥೆನ್ ಮಂತ ಪಣುಪೆರಾತಾ ||೪||

ಪಂಚಪಾಂಡವೇಕ್ಳೆ ಮನಸ್ ಪಂಚಬಾಣ ।
ವಂಚನೇಗ್ ಶಿಕ್ಕ್‌ನಾತ ಜಾನೆ ಪಣ್‌ಕೆ ||೫||

ರಾಜನಾಥ ಹಯಮುಖಾಂಘ್ರಿ ನೆನತೊಂತು ।
ವೋಪಿ ಪೊರ್ಲು ಸೂವೆರೇಗ್ ಬೇಗ ಬಲ್ಲೆ ||೬||

## (೨)

# ಸಂಸ್ಕೃತ ರಚನೆ

ರಾಗ ಖರಹರಪ್ರಿಯ, ಆದಿತಾಳ

ಬಾಭಾತಿ ಸಾ ಶಿವರೂಪ್ಯಪುರೀ । ದ್ವಾರಕೋಪಮಾನಕಪುರೀ ॥ಪ॥
ವ್ರಜಪಾಲ ಬಾಲಾನ್ವಿತಾ ।

ದ್ವಿಜರಾಜ ಮೂರ್ಧಾನ್ವಿತಾ ।
ದ್ವಿಜಪಾರ ಕೋಲಾಹಲಾ । ಸುಜನೈಕ ವಾಸಾನ್ವಿತಾ ॥೧॥

ಕುಂಡಿನೇಶಜಾರ್ಚಾನ್ವಿತಾ ।
ಶೌಂಡಮಧ್ವಪೂಜಾನ್ವಿತಾ ।
ಖಾಂಡವಾರಿಸೂತಾಧೃತಾ । ದಂಡದಾಮಧರಾನ್ವಿತಾ ॥೨॥

ರಾಜೇಶ ಶ್ರೀಹಯಮುಖಕಿಂಕರಾಗ್ರ್ಯಾನಂದತೀರ್ಥ ।
ರಾಜಮಾನ ಚಾರುಚರಣ ಪಂಕಜಾತಿಶೋಭಾನ್ವಿತಾ ॥೩॥

(೩)

## ಶ್ರೀ ವಿಶ್ವೇಂದ್ರಕೃತ
## ಶ್ರೀವಾದಿರಾಜಮಂಗಲಾಷ್ಟಕಮ್

ಶ್ರೀಮತ್ತೌಲವಮಂಡಲೇ ಸುಮಪುರೇ ಕುಂಭಾಸಿ ತೋಽದೂರತೋ
ವಾಣ್ಯಾಂ ರಾಮಬುಧಾತ್ಸುತಸ್ಸಮ ಭವದ್ವಾಗೀಶತೀರ್ಥಾಶಿಷಾ।
ಕೇದಾರೇಽಷ್ಟಮವತ್ಸರೇ ಯತಿಪದಂಚಾಲಾಭಿ ವಾಗೀಶ್ವರಾ-
ದಶ್ವಾಸ್ಯಾನುಗವಾದಿರಾಜಗುರುರಾಡ್ವದ್ಯಾತ್ಸದಾ ಮಂಗಲಮ್ ॥೧॥

ಬಾಲ್ಯಾದ್ವಾಗ್ಯುಧಿ ಸರ್ವವಾದಿ ಮದಹಾಽ ತೋ ವಾದಿರಾಜಾಭಿಧಾ
ಮನ್ವರ್ಥಿಃ ಕುರುತೇ ವಿರಕ್ತಿಶಮನಜ್ಞಾನಾದಿಸದ್ವಿಗ್ರಹಃ।
ಪೂರ್ಣಪ್ರಜ್ಞಮತಪ್ರಚಾರಣಕೃತೇ ಸಮ್ಯಗ್ವ್ಯಧಾದ್ದಿಗ್ಜಯಂ
ಅಶ್ವಾಸ್ಯಾನುಗವಾದಿರಾಜಗುರುರಾಡ್ವದ್ಯಾತ್ಸದಾ ಮಂಗಲಮ್ ॥೨॥

ಗತ್ವಾಽಸೇತುಹಿಮಾಚಲಂ ನರಹರೇಸ್ಸ್ಥಾನಾನಿ ಸರ್ವಾಣಿ ಚ
ಸ್ನಾತ್ವಾ ತೀರ್ಥವರೇಷು ಭಕ್ತ ಕರೇಷ್ವಾಸ್ಥಾಪ್ಯ ಮಾಧ್ವಂ ಮತಮ್
ತೀರ್ಥೇಷೂತ್ತಮತಾಪ್ಯಸೂಚಿ ಗುರುಣಾ ತೀರ್ಥಪ್ರಬಂಧೋಕ್ತಿಭಿಃ
ಅಶ್ವಾಸ್ಯಾನುಗವಾದಿರಾಜಗುರುರಾಡ್ವದ್ಯಾತ್ಸದಾ ಮಂಗಲಮ್ ॥೩॥

ಭೂಮ್ಯಾಂ ಸ್ಥಾಪಿತ ಭೂಮಿಪಾಲತನಯಂ ಯೋಽಜೀವಯತ್ತೀರ್ಥತೋ
ಭೂಪಾದ್ದತ್ತಮನರ್ಘ್ಯ ವಿತ್ತಮತುಲಂ ಗಂಗಾಜಲೇ ಪ್ರಾಕ್ಷಿಪತ್।
ಲಕ್ಷ್ಮ್ಯಾಃ ಪ್ರಾಕೃತಪದ್ಯತೋಽನವವರಂ ಯೋಽಜೀವಯನ್ಮಂಡಪೇ
ಆಶ್ವಾಸ್ಯಾನುಗವಾದಿರಾಜಗುರುರಾಡ್ಜದ್ಯಾತ್ಸದಾ ಮಂಗಲಮ್ ||೪||

ಭೂಮ್ಯಾಂ ಸ್ಥಾಪಿತ ಭೂಮಿಪಾಲತನಯಂ ಯೋಽಜೀವ ಯತ್ತೀರ್ಥತೋ
ಭೂಪಾದ್ದತ್ತ ಮನರ್ಘ್ಯವಿತ್ತಮತುಲಂ ಗಂಗಾಜಲೇ ಪ್ರಾಕ್ಷಿಪತ್!
ಲಕ್ಷ್ಮ್ಯಾಃ ಪ್ರಾಕೃತಪದ್ಯತೋ ನವವರಂ ಯೋಽಜೀವ ಯನ್ಮಂಡಪೇ
ಆಶ್ವಾಸ್ಯಾನುಗವಾದಿ ರಾಜಗುರುರಾಡ್ಡದ್ಯಾತ್ಸದಾ ಮಂಗಲಮ್ ||೪||

ಯೋ ಜಾನುದ್ವಯತೋ ಗಿರಿಂ ಮುನಿವರ್ಯೈಃ ಪೂರ್ಣಂ ಸ ಗತ್ವಾ ತತೋ
ಗಂಡಕ್ಯಾಹೃತ ಮಾಲಿಕಾಮಥ ದದೌ ಶ್ರೀ ವೆಂಕಟೇಶಾಯ ಚ ।
ಅಬ್ದಾರ್ಧಂ ಸಮುಪ್ರೋಷ್ಯ ಸದ್ಗುರುವರೋ ಯೋ ದ್ವಾರಕಾ ಪತ್ತನೇ
ಅಶ್ವಾಸ್ಯಾನುಗವಾದಿ ರಾಜಗುರುರಾಡ್ಡ ದ್ಯಾತ್ಸದಾ ಮಂಗಲಮ್ ||೫||

ಯೋ ಭೀಮಾತಟಸಂಸ್ಥಿತೋ ಮುನಿವರಸ್ತಸ್ಯಾಂತರಾ ವಾಜಿನಂ
ಕೋಪೇನಾನುಗತೋಽಪಿ ನೈವ ನಯನಸ್ಯಾಲಕ್ಷ್ಯತಾಂ ವೈ ಗತಃ ।
ಅಶ್ವಾಸ್ಯೋ ದಿಶತೀಷ್ಟಮೇವ ಭವತೋಽಪ್ಯುಕ್ತೋ ಗತಸ್ತತ್ತಥಾ
ಅಶ್ವಾಸ್ಯಾನುಗ ವಾದಿರಾಜಗುರುರಾಡ್ಡದ್ಯಾತ್ಸದಾ ಮಂಗಲಮ್ ||೬||

ಶ್ರೀಮತ್ಪುಣ್ಯಪುರೇ ವಿಚಿತ್ರವಚನಾಲಂಕಾರಸನ್ಮಾನಿತಂ
ಭೂಪಾಲಾಂಚಿತರುಕ್ಮಿಣೀಶವಿಜಯಂ ಸಂಸ್ಥಾಪ್ಯನಾಗೋಪರಿ।
ವಿಂಶತ್ಸ್ವೇವ ದಿನೇಷು ಮಾಘಕವಿತಾಸಂಸ್ಪರ್ಧಿನೀಂ ಯೋऽಕರೋ-
ದಶ್ವಾಸ್ಯಾನುಗವಾದಿರಾಜ ಗುರುರಾಡ್ದದ್ಯಾತ್ಸದಾ ಮಂಗಲಮ್ ॥೭॥

ಪೂರ್ಣಪ್ರಜ್ಞಮತ ಪ್ರತಿಷ್ಠಿತಿಕೃತೇ ಪರ್ಯಾಯ ಸೇವಾಕ್ರಮಂ
ಕೃತ್ವಾಲಿಂಗಿನೃಪಂ ಸ್ವಶಿಷ್ಯಮಕರೋತ್ತ್ರೈ ವಿಕ್ರಮಸ್ಥಾಪನಮ್।
ಯೋ ಲಕ್ಷಾಭರಣಾದಿ ಸತ್ಕೃತಿವರಾದ್ವಾಗೀಶತಾಂ ಸ್ಪಷ್ಟಯ-
ನ್ನಶ್ವಾಸ್ಯಾನುಗವಾದಿರಾಜಗುರುರಾಡ್ದದ್ಯಾತ್ಸದಾ ಮಂಗಲಮ್ ॥೮॥

ವಿಶ್ವಾಧೀಶಮುನೇಃ ಶಿಷ್ಯವಿಶ್ವೇಂದ್ರಯತಿನಾ ಕೃತವ್।
ಹಯಗ್ರೀವ ಪದಾಸಕ್ತ ವಾದಿರಾಜಾಷ್ಟಕಂ ಶುಭಮ್ ॥೯॥



# ಅನುಬಂಧ (ಆ)

## ಶ್ರೀ ವಿಶ್ವೇಂದ್ರರ ಸ್ತುತಿಪರ ಹಾಡು

ರಾಗ ಕಲ್ಯಾಣ, ಝುಂಪತಾಳ

ವಿಶ್ವೇಂದ್ರಯತಿವರರ ಚರಣಗಳಿಗೆರಗಿದರೆ
ಕಶ್ಮಲವ ಕಳೆದೆಮ್ಮ ಸತತ ಸಲಹುವರೂ ||ಪ||
ವಿಶ್ವಪ್ರಿಯರಾ ಕುವರ ವಿಶ್ವಾಧೀಶರ ಕರದಿ
ವಿಶ್ವೇಂದ್ರಯತಿಯಾಗಿ ಪೀಠದಲಿ ಬಂದಂಥಾ ||ಅ||ಪ||

ಹತ್ತರಾಮೇಲ್ಯೆದು ವತ್ಸರವು ಬರುತಿರಲು
ಸ್ತುತ್ಯವಿಶ್ವಾಧೀಶರಾಜ್ಞೆಯಲಿ ಬಂದೂ ||
ಚಿತ್ತಜಾಪಿತನ ಸೇವೆಗೆ ಸಿದ್ಧರಾಗುತಲಿ
ಸ್ತುತ್ಯ ವೈರಾಗ್ಯದಲಿ ಸನ್ಯಾಸ ಪಡೆದಂಥಾ ||೧||

ಆರೆಂಟು ವರ್ಷಗಳು ಭೂವರಾಹನ ಸೇವೆ
ಸಾರಸಂಭ್ರಮದಿಂದ ಮಾಡುತ್ತಲೀ ||
ಮೂರು ಪರ್ಯಾಯಗಳ ವೈಭವದಿ ಮಾಡುತ್ತ
ಧೀರ ಕೃಷ್ಣನ ಸೇವೆ ಮಾಡಿ ಸುಖಿಸಿದಂಥಾ ||೨||

ಯೋಗಿಗಳು "ರಾಜೇಶಹಯವದನ"ನಂಕಿತದಿ
ರಾಗತಾಳಗಳಲ್ಲಿ ಕೃತಿಗಳನು ರಚಿಸೀ ||
ಯೋಗೀಶಹಯಮುಖನ ಪಾದಕೇ ಅರ್ಪಿಸುತ
ಭಾಗವತ ಧರ್ಮವನು ಮೆರೆಸಿದಂಥಾ ಧೀರ ||೩||

ಹರಿಯಾಜ್ಞೆಯಿಂದಲೀ ಯತಿವರ್ಯರೂ ಬೇಗ
ಕರೆಸಿದರು ಮಾಧವನ ಮುದದಿಂದಲೀ ॥
ಕರಿವದನನಾದಿನದಿ ಪೀಠದಲಿ ಕುಳ್ಳಿರಿಸಿ
ಹರಿಸಿದರು "ವಿಶ್ವೋತ್ತಮಾ"ನಾಗು ಎಂದೆನುತಾ ॥೪॥

ಮತ್ತೆ ಮೂವತ್ತೈದು ದಿನದಿ ಧರೆಯೊಳಗಿದ್ದು
ಹೊತ್ತು ಕಳೆಯಿತು ಎಂದು ತಿಳಿಯುತ್ತಲೀ ॥
ಚಿತ್ರಭಾನು ವತ್ಸರದಿ ನವರಾತ್ರಿ ನವಮಿಯಲಿ
ಚಿತ್ತಜನಪಿತ ಉಡುಪಿ ಕೃಷ್ಣನಡಿಗೈದಿದರು ॥೫॥

ಬೆಂಗಳೂರು - ಪ್ರಹ್ಲಾದಾಚಾರ್

## ಕೀರ್ತನೆಗಳ ಅಕಾರಾದಿ

## ಹಾವನೂರಿನ ಶ್ರೀ ವಾದಿರಾಜ

## ಮೃತ್ತಿಕಾ ವೃಂದಾವನ ಮಠದ ಪ್ರಕಟಣೆಗಳು

* ಹರಿದಾಸರು ಹೊಗಳಿ ಹಾಡಿದ ಶ್ರೀ ವಾದಿರಾಜರು ೧೯೯೮
  ಬೆಲೆ ರೂ. ೪೦
* ಹರಿದಾಸರು ಸ್ತುತಿಸಿದ ಶ್ರೀ ಸತ್ಯಬೋಧರು ೨೦೦೧
  ಬೆಲೆ ರೂ. ೨೮
* ಶ್ರೀ ವಿಶ್ವೇಂದ್ರ ತೀರ್ಥರ ಕೀರ್ತನಮಂಜರಿ ೨೦೦೧
  ಬೆಲೆ ರೂ.೩೦
* ಹರಿದಾಸರು ಸ್ತುತಿಸಿದ ಶ್ರೀ ಮಂತ್ರಾಲಯ ಮಠದ ಯತಿವರ್ಯರುಗಳು ೨೦೦೧
  ಅಚ್ಚಿನಲ್ಲಿ
* ಶ್ರೀ ವಾದಿರಾಜರ ಸುಲಭಕೃತ ತೀರ್ಥ ಪ್ರಬಂಧ ೨೦೦೧
  ಅಚ್ಚಿನಲ್ಲಿ



ಸೋದೆ ಮಠದ ಈಗಿನ ಶ್ರೀಗಳಾದ ಶ್ರೀ ವಿಶ್ವೋತ್ತಮ ತೀರ್ಥರ ಗುರುಗಳೇ ಶ್ರೀವಿಶ್ವೇಂದ್ರ ತೀರ್ಥರು. ಪೂಜ್ಯ ಶ್ರೀ ವಾದಿರಾಜರ ಕೀರ್ತನೆಗಳ ಹಿರಿಮೆಯನ್ನು ನಾವು ಬಲ್ಲೆವು. ಅವರ ಅನಂತರ ಕೀರ್ತನೆಗಳನ್ನು ರಚಿಸಿದವರು ಶ್ರೀ ವಿಶ್ವೇಂದ್ರತೀರ್ಥರು. ಅವರು ಧಾರ್ಮಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ನಾನಾ ರೀತಿಯ ಕಾರ್ಯವೆಸಗಿ ಹೆಸರುವಾಸಿ ಆಗಿದ್ದರು.

ಪ್ರಕೃತ ಅವರು ರಚಿಸಿದ ಹಾಡುಗಳು ಇಲ್ಲಿವೆ. ಎಲ್ಲವೂ ಅತ್ಯಂತ ಸರಳ–ಸುಲಭವಾದವುಗಳು. ಅವೆಲ್ಲ ಶ್ರೀಹರಿಯ ವಿವಿಧ ರೂಪಗಳ ಅನ್ಯ ದೇವತೆಗಳ, ಯತಿವರ್ಯರ, ವಿಶೇಷತಃ ಸೋದೆ ಮಠದವರ ಸ್ತುತಿಪರ ಕೀರ್ತನೆಗಳು.

ಈ ಸ್ತುತಿಪರತೆಯಲ್ಲಿ ನೀರಸತೆ ಇಲ್ಲ. ಕಾರಣವೆಂದರೆ ಅವರು ವ್ಯಾಜನಿಂದಾಸ್ತುತಿ ಮತ್ತು ಚತುರೋಕ್ತಿಗಳನ್ನು ತಂದಿರುವುದು. ಜೊತೆಗೆ ಅನುಪ್ರಾಸದ ಹೆಚ್ಚಳದಿಂದ ಗೇಯತೆಯೂ ಸಾಧಿಸಿದೆ.

ದ.ಕ. ಪರಿಸರದಲ್ಲಿ ಹರಿದಾಸರು ಹೆಚ್ಚಾಗಿ ಕಂಡುಬರುತ್ತಿಲ್ಲ. ಆ ಕೊರತೆಯನ್ನು ಈ ಸಂಕಲನವು ಕಡಿಮೆಗೊಳಿಸಿದೆ.

ಸಂಪಾದಕ : ಶ್ರೀನಿವಾಸ ಹಾವನೂರ

ಶ್ರೀ ವಾದಿರಾಜ ಮೃತ್ತಿಕಾ ವೃಂದಾವನ ಹಾವನೂರ ರೂ. 30